# ಹುಕ್ಕೇರಿ ತಾಲೂಕು ಪರಿಸರದ ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಕಿರುಪ್ರಬಂಧ)


ಸಂಶೋಧಕ

ಸುರೇಶಕುಮಾರ ಪಾಂಗಿ

ಮಾರ್ಗದರ್ಶಕರು

ರಮೇಶ ನಾಯಕ

ಸಹ ಪ್ರಾಧ್ಯಾಪಕ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ







ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೩.

1034

# ಹುಕ್ಕೇರಿ ತಾಲೂಕು ಪರಿಸರದ ಸಾಂಸ್ಕೃತಿಕ ಅಧ್ಯಯನ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)

ಸಂಶೋಧಕ
ಸುರೇಶಕುಮಾರ ಪಾಂಗಿ

ಮಾರ್ಗದರ್ಶಕರು
ರಮೇಶ ನಾಯಕ
ಸಹ ಪ್ರಾಧ್ಯಾಪಕ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ



ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೩



# ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

---

## ಪ್ರಮಾಣ ಪತ್ರ

**ಹುಕ್ಕೇರಿ ತಾಲೂಕು ಪರಿಸರದ ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ರಮೇಶ ನಾಯಕ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಶೋಧನ ಸಂಪ್ರಬಂಧವನ್ನು ಇಡಿಯಾಗಿ ಇಲ್ಲವೆ ಬಿಡಿಯಾಗಿ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

**ಸುರೇಶಕುಮಾರ ಪಾಂಗಿ**

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

ಸ್ಥಳ: ವಿದ್ಯಾರಣ್ಯ

ದಿನಾಂಕ: 29-8-2013



# ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

## ದೃಢೀಕರಣ ಪತ್ರ

ಶ್ರೀ ಸುರೇಶಕುಮಾರ ಪಾಂಗಿ ಅವರು **ಹುಕ್ಕೇರಿ ತಾಲೂಕು ಪರಿಸರದ ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಸಂಪ್ರಬಂಧದ ಸಮಗ್ರ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢ್ಯಕರಿಸುತ್ತೇನೆ.

**ಮಾರ್ಗದರ್ಶಕರು**

**ರಮೇಶ ನಾಯಕ**
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ:29-8.2013

## ಪರಿವಿಡಿ

# ಅಧ್ಯಾಯ-ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

ಹುಕ್ಕೇರಿ ತಾಲೂಕು ಪರಿಸರದಲ್ಲಿರುವ ಪ್ರತಿ ಗ್ರಾಮಗಳು ವಿಶಿಷ್ಟವಾದ ಸ್ಥಳ ಪುರಾಣ, ಸ್ಥಳನಾಮ, ಐತಿಹ್ಯವನ್ನು ಹೊಂದಿದ್ದಲ್ಲದೇ ಅವು ಐತಿಹಾಸಿಕ ಮಹತ್ವವನ್ನು ಸಹ ಪಡೆದುಕೊಂಡಿವೆ. ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುವ ವಿಶೇಷ ಆಕರಗಳನ್ನು ಒಳಗೊಂಡಿವೆ. ಅಂಥ ಆಕರಗಳ ಸಮಗ್ರ ಹಾಗೂ ಸೂಕ್ಷ್ಮ ಬಳಕೆಯಿಂದ ಈ ಪರಿಸರದ ಚರಿತ್ರೆಯ ರಚನೆಗೆ ಸಂಬಂಧಿಸಿದ ಹೊಸ ಮಾರ್ಗಗಳು ನಿರ್ಮಾಣವಾಗುತ್ತವೆ. ಈ ನಿಟ್ಟಿನಲ್ಲಿ ರಾಜ್ಯ ಮತ್ತು ರಾಷ್ಟ್ರದ ಚರಿತ್ರೆ ಹೆಚ್ಚು ಹೆಚ್ಚು ಸ್ವಂತಿಕೆಯನ್ನು ಪಡೆದುಕೊಳ್ಳಬೇಕಾದರೆ ಅದು ಗ್ರಾಮಗಳತ್ತ ದೃಷ್ಟಿ ಹರಿಸುವುದು ಅನಿವಾರ್ಯ. ಅಂದರೆ ಒಂದು ದೇಶದ ಅಥವಾ ನಾಡಿನ ಪ್ರಮುಖ ಘಟಕವಾದ ಸಮುದಾಯಗಳ ಬದುಕಿನ ತಳಹದಿಯ ಮೇಲೆ ಸಂಸ್ಕೃತಿಯು ರೂಪಿತವಾಗಬೇಕಾಗಿದೆ. ಇಂಥ ಸಮುದಾಯಗಳ ಮೂಲ ನೆಲೆಗಳೇ ಪ್ರತಿ ಗ್ರಾಮಗಳಾಗಿವೆ. ಈ ಹಿನ್ನೆಲೆಯಲ್ಲಿ ಪ್ರತಿ ಗ್ರಾಮಗಳ ವಿವರಗಳನ್ನು ಒಳಗೊಂಡು ನಿರ್ಮಾಣವಾಗುವ ಸಾಂಸ್ಕೃತಿಕ ಅಧ್ಯಯನಗಳು ಪ್ರಸ್ತುತ ಸಂದರ್ಭದಲ್ಲಿ ಹೆಚ್ಚಿನ ಮಹತ್ವವನ್ನು ಪಡೆದುಕೊಳ್ಳುತ್ತವೆ. ಪ್ರಾಚೀನ ಕಾಲದಿಂದಲೂ ಜನ ಸಂಸ್ಕೃತಿಯೂ, ಆಳ್ವಿಕೆ ಮಾಡಿದ ರಾಜರುಗಳ ಮತ್ತು ಅಧಿಕಾರಿಗಳ ಆಡಳಿತಾವಧಿಯಲ್ಲಿ ಹಲವಾರು ಬದಲಾವಣೆಗಳಿಗೆ ಈಡಾಗುತ್ತಲೇ ಬಂದಿವೆ. ಸಂಸ್ಕೃತಿಯ ಭಾಗವಾಗಿಯೇ ಆಯಾ ಕಾಲದಲ್ಲಿ ರಚನೆಯಾಗಿರುವ ದೇವಾಲಯಗಳು ಶಾಸನಗಳು, ಕೋಟೆ-ಕೊತ್ತಲಗಳು, ಕೆರೆ-ಕಟ್ಟೆಗಳು ಹಾಗೂ ಸಾಹಿತ್ಯ ಕೃತಿಗಳು ಆಯಾ ಪ್ರದೇಶದ ಸಂಸ್ಕೃತಿಯನ್ನು ಕಟ್ಟಿಕೊಡುವಲ್ಲಿ ಪ್ರಮುಖ ಪಾತ್ರ ವಹಿಸಿವೆ. ಪ್ರಮುಖವಾಗಿರುವ ಇಂಥ ಪ್ರಾಚೀನ ವಿವರಗಳು ಪ್ರಸ್ತುತ ತಾಲೂಕು ಪರಿಸರದಲ್ಲಿಯೂ ನಿರ್ಮಾಣವಾಗಿವೆ. ಅವುಗಳನ್ನೆಲ್ಲ ಸಮಗ್ರವಾಗಿ ಬಳಸಿಕೊಂಡು ಹುಕ್ಕೇರಿ ತಾಲೂಕು ಪರಿಸರದ ಸಾಂಸ್ಕೃತಿಕ ಅಧ್ಯಯನವನ್ನು ಪೂರೈಸುವ ಪ್ರಯತ್ನದ ಹಿನ್ನೆಲೆಯಲ್ಲಿ ಈ ವಿಷಯವನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

### ಅಧ್ಯಯನದ ಉದ್ದೇಶ

ಬೆಳಗಾವಿಯ ಜಿಲ್ಲೆಯಲ್ಲಿರುವ ಸಾಂಸ್ಕೃತಿಕ ಮತ್ತು ಐತಿಹಾಸಿಕ ಮಹತ್ವವುಳ್ಳ ತಾಲೂಕುಗಳಲ್ಲಿ ಹುಕ್ಕೇರಿಯೂ ಒಂದಾಗಿದ್ದು, ಅದು ಪ್ರಾಕೃತವಾಗಿಯೂ, ಸಾಂಸ್ಕೃತಿಕವಾಗಿಯೂ ಮಾತ್ರವಲ್ಲದೆ, ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕವಾಗಿಯೂ ವಿಶೇಷ ಗಮನವನ್ನು ಸೆಳೆದಿದೆ. ಶತ ಶತಮಾನಗಳ ಸಂಪದ್ಭರಿತವಾದ ಇತಿಹಾಸ ಮತ್ತು ಪರಂಪರೆಯನ್ನು ಈ ಪರಿಸರವು ಹೊಂದಿದೆ. ಆದಿಮಾನವನ ಪ್ರಾರಂಭದ ಹೆಜ್ಜೆ ಗುರುತುಗಳು ಈ ಪ್ರದೇಶದಲ್ಲಿ ಮೂಡಿವೆ. ಐತಿಹಾಸಿಕ

ಕಾಲವು ವಿವಿಧ ರಾಜಮನೆತನಗಳ ಹಾಗೂ ಅಧಿಕಾರಿಗಳ ಆಳ್ವಿಕೆಗೆ ಒಳಗಾಗಿದೆ. ಆ ಕಾಲದಲ್ಲಿ ನಿರ್ಮಿಸಿ ಬಿಟ್ಟುಹೋಗಿರುವ ಸಂಗತಿಗಳು ಈ ಕಾಲದಲ್ಲಿ ಅವಶೇಷಗಳಾಗಿ ಹರಡಿಕೊಂಡಿವೆ. ಅಂಥ ಆಕರಗಳನ್ನು ಬಳಸಿಕೊಂಡು ಈ ಪ್ರದೇಶ ಪುರಾತತ್ವ ಮತ್ತು ಇತಿಹಾಸವನ್ನು ಸಂಸ್ಕೃತಿಕವಾಗಿ ಕಟ್ಟಿಕೊಡುವ ಪ್ರಯತ್ನ ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ.

ಹುಕ್ಕೇರಿ ತಾಲೂಕಿನ ಇತಿಹಾಸ ಮತ್ತು ಪುರಾತತ್ವ ವಿವರಗಳನ್ನು ಕಟ್ಟಿಕೊಳ್ಳುವಲ್ಲಿ ಭೌಗೋಳಿಕ ಪರಿಸರ ಅಲ್ಲಿ ನಿರ್ಮಾಣವಾಗಿರುವ ದೇವಾಲಯಗಳು, ಮಹತ್ವದ ಪಾತ್ರವಹಿಸುತ್ತವೆ. ಈ ಪರಿಸರದಲ್ಲಿ ಸರಿಸಮಾನವಾಗಿ ಎಲ್ಲ ಮತ–ಪಂಥಗಳು ಬೆಳೆದು ಬಂದವು. ಆದರೂ ಅವುಗಳಲ್ಲೆಲ್ಲ ಜೈನ ಮತ–ಪಂಥವು ವಿಶೇಷವಾಗಿ ಹೆಚ್ಚಿನ ಪ್ರಮಾಣದಲ್ಲಿ ತನ್ನ ಪ್ರಭಾವವನ್ನು ಬೆಳೆಸಿಕೊಂಡಿತು. ಹೀಗಾಗಿ ಜೈನ ಪಂಥಕ್ಕೆ ಸಂಬಂಧಿಸಿದ ಆಕರಗಳು ಹೆಚ್ಚಿನ ಸಂಖ್ಯೆಯಲ್ಲಿ ಈವರೆಗೂ ಕಂಡುಬರುತ್ತವೆ.[1] ಜೈನ ಶಾಸನಗಳು ಹೆಚ್ಚಿನ ವಿಶೇಷತೆಯನ್ನು ಪಡೆದಿವೆ. ಉಳ್ಳಾಗಡ್ಡಿ ಖಾನಾಪುರದಲ್ಲಿ ಎಂಟು ಶಿಲಾಶಾಸನಗಳು ಕಂಡುಬಂದಿವೆ. ಅವುಗಳಲ್ಲಿ ರಟ್ಟರಸರಿಗೆ ಸಂಬಂಧಿಸಿದವು ಹೆಚ್ಚಿನ ಸಂಖ್ಯೆಯಲ್ಲಿವೆ. ಈ ಶಾಸನಗಳಲ್ಲಿ ಜಿನಾಲಯಗಳನ್ನು ನಿರ್ಮಿಸಿರುವ ಮತ್ತು ಅವುಗಳ ನಿತ್ಯ ನಿರ್ವಹಣೆಗೆ ಭೂಮಿಯನ್ನು ದಾನವಾಗಿ ನೀಡಿರುವ ವಿವರಗಳು ದಾಖಲಾಗಿವೆ.[2] ಹುಕ್ಕೇರಿಯಲ್ಲಿ ಜೈನಧರ್ಮವು ಭದ್ರವಾಗಿ ತಳವೂರಲು ರಾಜ ಮಹಾರಾಜರುಗಳು, ಚಿಕ್ಕ ಪುಟ್ಟ ಆಡಳಿತಗಾರರು ಹೊಂದಿದ ಪ್ರೀತಿ ಮತ್ತು ನಿಷ್ಠೆಗಳು ಆ ಧರ್ಮದ ಬೆಳವಣಿಗೆಯ ಪ್ರೋತ್ಸಾಹಕ್ಕೆ ಮುಖ್ಯ ಕಾರಣವಾಯಿತು. ಜೈನ ಮತ, ಪಂಥವಲ್ಲದೇ ಲಿಂಗಾಯತ ಮತದ ಕುರುಹುಗಳು ವಿಶೇಷವಾಗಿ ಈ ಪರಿಸರದಲ್ಲಿ ಕಂಡುಬಂದಿವೆ. ಅವುಗಳಲ್ಲಿ ಮುಖ್ಯವಾಗಿ ಅರ್ಜುನವಾಡ ಶಿಲಾಶಾಸನವು ಒಂದು. ಬಸವೇಶ್ವರರ ಹಾಗೂ ಅವರ ಪೂರ್ವಜರ ವಂಶಾವಳಿಯ ಬಗ್ಗೆ ಈ ಶಾಸನವು ವಿಶೇಷ ಬೆಳಕನ್ನು ಚೆಲ್ಲುತ್ತದೆ. ಈ ಪ್ರದೇಶದಲ್ಲಿ ಆ ಕಾಲದಲ್ಲಿ ರಚನೆಯಾದ ಸಾಹಿತ್ಯ ಕೃತಿಗಳು ಸಹ ಜೈನ ಧರ್ಮದ ಮತ್ತು ಶೈವ ಧರ್ಮಗಳ ಪ್ರಭಾವದಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಜಿನಶಾಸನಗಳು, ಜಿನಾಲಯಗಳು, ದೇವಾಲಯಗಳು ಹಾಗೂ ಇತರ ಸ್ಮಾರಕಗಳು ಈ ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಾಣವಾದವು. ಅವುಗಳನ್ನು ಶಿಸ್ತುಬದ್ಧವಾಗಿ ಅಧ್ಯಯನ ಮಾಡುವ ಪ್ರಯತ್ನವನ್ನು ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ.

ಕುಂತಳ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ರಾಜ ಮನೆತನಗಳಾದ ಶಾತವಾಹನ, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಯಾದವರು, ಹೊಯ್ಸಳರು, ವಿಜಯನಗರದ ಅರಸರು ಮತ್ತು ಆದಿಲ್‌ಷಾಹಿಗಳ ಪ್ರಭಾವಕ್ಕೆ ಈ ಪ್ರದೇಶ ಒಳಪಟ್ಟಿತ್ತು. ಆದರೆ ರಾಷ್ಟ್ರಕೂಟ ಸಾಮಂತರಾದ ಸವದತ್ತಿಯ ರಟ್ಟರಸರು ವಿಶೇಷವಾಗಿ ಹುಕ್ಕೇರಿ ಪರಿಸರದಲ್ಲಿ ಆಳ್ವಿಕೆ ಮಾಡಿರುವುದನ್ನು ಗಮನಿಸಬಹುದು.[3] ಇವರ ಕಾಲದಲ್ಲಿ ರಚನೆಯಾದ ಶಾಸನಗಳು ಹಾಗೂ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿ ಈ ಪ್ರದೇಶದಲ್ಲಿ ಕಂಡುಬರುತ್ತವೆ. ಇಲ್ಲಿ ದೊರಕಿರುವ ಅಲ್ಪ ವಿವರಗಳನ್ನು ಆಧಾರವಾಗಿಟ್ಟುಕೊಂಡು ಕೆಲವು ಬಿಡಿ ಅಧ್ಯಯನಗಳು ಈಗಾಗಲೇ ಪ್ರಕಟವಾಗಿವೆ. ಆದರೆ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವ ಸಮಗ್ರ ಹಾಗೂ ಸೂಕ್ಷ್ಮ ದೃಷ್ಟಿಕೋನದ ಅಧ್ಯಯನಗಳು ಈ ಪರಿಸರಕ್ಕೆ ಸಂಬಂಧಿಸಿದಂತೆ ವಿರಳವೆಂದು ಅಭಿಪ್ರಾಯಿಸಬಹುದು. ಇಂಥ ಕೊರತೆಗಳನ್ನು ತಕ್ಕಮಟ್ಟಿಗೆ ಉಪಶಮನಗೊಳಿಸಲು ಈ ಪ್ರದೇಶದಲ್ಲಿ

ಸಿಕ್ಕಿರುವ ಆಕರಗಳು ಹಾಗೂ ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ವಿವರವಾದ ಅಧ್ಯಯನ ಕಟ್ಟಿಕೊಡುವ ಉದ್ದೇಶವನ್ನಿಟ್ಟುಕೊಂಡು ಪ್ರಸ್ತುತ ಪ್ರಯತ್ನವನ್ನು ಮಾಡಲಾಗಿದೆ. ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ದೃಷ್ಟಿಯಲ್ಲಿ ಮತ್ತು ಬಿಟ್ಟು ಹೋಗಿರುವ ಹಾಗೂ ಮುಂದುವರೆದ ವಿಷಯಗಳ ಮೇಲೆ ಹೊಸ ಬೆಳಕನ್ನು ಚೆಲ್ಲುವ ಪ್ರಯತ್ನ ಮಾಡಲಾಗಿದೆ. ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ ಹಲವಾರು ಗ್ರಂಥಗಳನ್ನು, ಲೇಖನ ಪ್ರಬಂಧಗಳನ್ನು ಬಳಸಿಕೊಂಡು ಈ ಪ್ರಬಂಧಕ್ಕೆ ಗಟ್ಟಿಯಾದ ನೆಲೆಗಟ್ಟನ್ನು ನಿರ್ಮಿಸುವ ಉದ್ದೇಶದ ಹಿನ್ನೆಲೆಯಲ್ಲಿ ಅಧ್ಯಯನವನ್ನು ಪೂರೈಯಿಸುವ ಪ್ರಯತ್ನ ಮಾಡಲಾಗಿದೆ.

**ವ್ಯಾಪ್ತಿ**

ಅಧ್ಯಯನದ ವ್ಯಾಪ್ತಿಯನ್ನು ಹುಕ್ಕೇರಿ ತಾಲೂಕಿನ ಪ್ರದೇಶಗಳಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ವಿಷಯವು ಹೆಚ್ಚಿನ ಸಮಗ್ರತೆಯನ್ನು ಪಡೆಯುವ ನಿಟ್ಟಿನಲ್ಲಿ ಕಾಲಾವಧಿಯನ್ನು ನಿರ್ದಿಷ್ಟ ಪಡಿಸಿಕೊಳ್ಳಲಾಗಿದೆ. ಹದಿನೆಂಟನೆಯ ಶತಮಾನದವರೆಗೂ ವಿಷಯದ ಕಾಲಮಿತಿಯನ್ನು ಗೊತ್ತುಪಡಿಸಿಕೊಳ್ಳಲಾಗಿದೆ. ಅಲ್ಲದೇ ಪ್ರಸ್ತುತ ಅಧ್ಯಯನವು ವ್ಯಾಪಕತೆ ಪಡೆಯುವ ನಿಟ್ಟಿನಲ್ಲಿ ಅವಶ್ಯಕವಾಗಿ ಮತ್ತು ಅನಿವಾರ್ಯತೆಯ ದೃಷ್ಟಿಕೋನದಲ್ಲಿ ಇತರೆ ಪ್ರದೇಶಗಳಲ್ಲಿ ಸಿಗುವ ಶಾಸನ ಹಾಗೂ ದೇವಾಲಯಗಳನ್ನು ಸಹ ಬಳಸಿಕೊಳ್ಳಲಾಗಿದೆ.

**ಸ್ವರೂಪ**

ಅಧ್ಯಯನವನ್ನು ಪ್ರಮುಖವಾಗಿ ಆರು ಅಧ್ಯಾಯಗಳಲ್ಲಿ ವಿಭಾಗಿಸಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ ಕುರಿತಾಗಿದೆ.

ಎರಡನೆಯ ಅಧ್ಯಾಯದಲ್ಲಿ ಹುಕ್ಕೇರಿ ಪ್ರದೇಶದ ಭೌಗೋಳಿಕತೆಯ ಮುಖ್ಯ ಲಕ್ಷಣಗಳಾದ ಭೂಮಿ, ನದಿ, ನೀರು ನೈಸರ್ಗಿಕ ಸಂಪನ್ಮೂಲಗಳು ಹಾಗೂ ಇತರೆ ಅವಶ್ಯಕ ಸಂಗತಿಗಳನ್ನು ಪರಿಗಣಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಹುಕ್ಕೇರಿ ಪ್ರದೇಶದ ಶಾಸನಗಳ ಕುರಿತು ಅಧ್ಯಯನ ಮಾಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಹುಕ್ಕೇರಿ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ಪ್ರಮುಖ ಮನೆತನಗಳ ರಾಜಕೀಯ, ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಹುಕ್ಕೇರಿ ಪ್ರದೇಶದಲ್ಲಿರುವ ದೇವಾಲಯಗಳು ಮತ್ತು ಮೂರ್ತಿಶಿಲ್ಪಗಳನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ.

ಆರನೆಯ ಅಧ್ಯಾಯದಲ್ಲಿ ಒಟ್ಟು ಅಧ್ಯಯನದ ಫಲಿತಾಂಶ, ಫಲಿತವನ್ನು ನೀಡಲಾಗಿದೆ. ಈ ಅಧ್ಯಯನಕ್ಕೆ ಅಗತ್ಯವಿರುವ ಆಕರಗಳು ಲೇಖನ ಸೂಚಿ, ನಕಾಶೆಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ.

ಆಕರಗಳಿಲ್ಲದೆ ಇತಿಹಾಸವಿಲ್ಲ. ಗತಕಾಲದಲ್ಲಿ ಆಗಿ ಹೋದ ಮಹತ್ವದ ಘಟನಾವಳಿಗಳನ್ನು ಕಾಲಾನುಕ್ರಮವಾಗಿ ನಿರೂಪಿಸಲು ಅಥವಾ ಪುನರ್‌ರಚಿಸಲು ಆಕರಗಳು, ಅತ್ಯವಶ್ಯಕ. ಯಾವುದೇ ಪ್ರದೇಶದ ಅಥವಾ ದೇಶದ ಇತಿಹಾಸವನ್ನು ನೈಜವಾಗಿ ತಿಳಿದುಕೊಳ್ಳಬೇಕಾದರೆ ಆಕರಗಳ ಮೊರೆ ಹೋಗಲೇಬೇಕು. ಆಕರಗಳು ಇತಿಹಾಸ ಎಂಬ ವಿಶಾಲವಾದ ವೃಕ್ಷದ ತಾಯಿಬೇರು ಗಳಿದ್ದಂತೆ. ಒಟ್ಟಿನಲ್ಲಿ ಆಕರಗಳು ಹೆಚ್ಚಿನ ಸಂಖ್ಯೆಯಲ್ಲಿ ಲಭ್ಯವಾದರೆ ಇತಿಹಾಸಕಾರರಿಗೆ ಆಯಾ ಪ್ರದೇಶದ ಇತಿಹಾಸ ರಚನಾ ವ್ಯಾಪ್ತಿಯು ಸುಲಭವಾಗಬಲ್ಲದು. ಪ್ರಸ್ತುತ ಅಧ್ಯಯನವನ್ನು ಪೂರೈಸಲು ಆಕರಗಳನ್ನು ಪ್ರಮುಖವಾಗಿ ಬಳಸಿಕೊಳ್ಳಲಾಗಿದೆ. ಅವುಗಳಲ್ಲಿ ಭೂಉತ್ಖನನದ ಫಲಿತಾಂಶಗಳು, ಶಾಸನಗಳು, ನಾಣ್ಯಗಳು, ಸ್ಮಾರಕಗಳು, ವೀರಗಲ್ಲುಗಳು ಮತ್ತು ಸಾಹಿತ್ಯ ಕೃತಿಗಳು ಪ್ರಮುಖವಾಗಿವೆ.

ಹುಕ್ಕೇರಿ ಪ್ರದೇಶದಲ್ಲಿ ಪ್ರಾಗೈತಿಹಾಸಿಕ ಕಾಲದ ನೆಲೆಗಳು ಕಂಡುಬಂದಿದೆ. ಡಾ. ಅ. ಸುಂದರ ಅವರು ಹುಕ್ಕೇರಿ ಸುತ್ತಮುತ್ತಲಿನ ಹಲವಾರು ಪ್ರದೇಶಗಳಲ್ಲಿ ಬೃಹತ್ ಶಿಲಾಯುಗದ ನೆಲೆಗಳ ಹಾಗೂ ವಿವಿಧ ಮಾದರಿಯ ಶಿಲಾ ಘೋರಿಗಳನ್ನು ಕ್ಷೇತ್ರಕಾರ್ಯದ ಮೂಲಕ ಅನ್ವೇಷಣೆ ಮಾಡಿದ್ದಾರೆ. ಅವುಗಳ ವಿವರಗಳನ್ನು ಪ್ರಸುತ್ತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.[4]

ಇತಿಹಾಸ ರಚನೆಗೆ ಶಾಸನಗಳು ಒದಗಿಸುವ ಮಾಹಿತಿಯು ಪ್ರಮಾಣಿಭೂತವಾದುದೆಂದು ಭಾವಿಸಲಾಗಿದೆ. ಶಾಸನಗಳ ಅಭ್ಯಾಸದ ವ್ಯಾಪ್ತಿಯು ವಿಶಾಲವಾದುದು. ಅಷ್ಟೇ ಆಳವಾದುದು. ಹೆಚ್ಚು ಹೆಚ್ಚು ಒಳಹೊಕ್ಕು ನೋಡಿದಂತೆ ನಮ್ಮ ಸಂಸ್ಕೃತಿಯ ವಿವಿಧ ಮುಖಗಳ ಅಭ್ಯಾಸವನ್ನು ಶ್ರೀಮಂತಗೊಳಿಸುವ ಅಣಿಮುತ್ತುಗಳು ಹೊರಬರುತ್ತಲೇ ಇರುತ್ತವೆ. ಬರೀ ರಾಜಕೀಯ ಇತಿಹಾಸವಷ್ಟೇ ಅಲ್ಲದೇ ಕಲೆ, ಸಾಹಿತ್ಯ, ಧರ್ಮ, ಭಾಷೆ, ಅರ್ಥ ವ್ಯವಸ್ಥೆ, ವಾಸ್ತು ಮತ್ತು ಶಿಲ್ಪಕಲೆ ಮುಂತಾದ ಸಾಂಸ್ಕೃತಿಕ ಅಂಶಗಳ ಕುರಿತು ಭೌಗೋಳಿಕ ಮತ್ತು ಕಾಲಮಾನದ ಚೌಕಟ್ಟಿನಲ್ಲಿ ಇತಿಹಾಸವನ್ನು ರಚಿಸುವ ನಿಟ್ಟಿನಲ್ಲಿ ಶಾಸನಗಳ ಪಾತ್ರ ಹಿರಿದಾದುದು.

ಹುಕ್ಕೇರಿಯ ಪ್ರದೇಶದಲ್ಲಿ ಬಹಳಷ್ಟು ಶಾಸನಗಳು ದಾನದತ್ತಿ, ಭೂದಾನ, ಧಾರ್ಮಿಕ ಆಚರಣೆಗಳಿಗೆ, ಅಗ್ರಹಾರಗಳಿಗೆ ದೇವಾಲಯಗಳ ನಿರ್ಮಾಣಕ್ಕೆ ದಾನ ನೀಡಿದರ ಬಗ್ಗೆ ಉಲ್ಲೇಖಿಸುತ್ತವೆ. ಇಂಥ ಪ್ರಮುಖ ಶಾಸನಗಳನ್ನು ಈ ಅಧ್ಯಯನ ಪೂರೈಸುವಲ್ಲಿ ಬಳಸಿಕೊಳ್ಳಲಾಗಿದೆ.

ಕಳೆದು ಹೋದಂತಹ ಇತಿಹಾಸವನ್ನು ರಚಿಸುವಲ್ಲಿ ನಾಣ್ಯಗಳು ಸಹ ಮಹತ್ವದ ಪಾತ್ರವಹಿಸುತ್ತವೆ. ನಾಣ್ಯಗಳ ಮೇಲೆ ಇರುವ ಅರಸರ ಚಿತ್ರಗಳು, ಅರಸರ ಹೆಸರು, ಕಾಲಮಾನ, ಬಿರುದು, ಚಿಹ್ನೆ, ಲಾಂಛನ ಇವೆಲ್ಲವೂ ಇತಿಹಾಸ ರಚಿಸುವಲ್ಲಿ ಸಹಾಯಕವಾಗುವ ಆಕರ ಸಾಮಗ್ರಿಗಳಾಗಿವೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕದಂಬರ ಕಾಲದ ಬಂಗಾರದ ನಾಣ್ಯದ ಮೇಲೆ ಸಿಂಹ, ಕಮಲ ಚಿತ್ರಗಳಿದ್ದು ಹಾಗೂ ಪಲ್ಲವರ ಕಾಲದ ನಾಣ್ಯಗಳ ಮೇಲೆ ವೃಷಭ ಚಿತ್ರಗಳು ಕಂಡುಬಂದಿವೆ. ರಾಜಕೀಯ ಹಿನ್ನೆಲೆ ರಚಿಸುವಾಗ ಶಾತವಾಹನರಿಗೆ ಸಂಬಂಧಿಸಿದ ಹಲವು ನಾಣ್ಯಗಳು ಬೆಳಗಾವಿಯ ವಡಗಾಂವ, ಮಾಧವಪುರದಲ್ಲಿ ದೊರೆತಿದ್ದು ಇದರಿಂದ ಈ ಪ್ರದೇಶವು ಅವರ ಆಳ್ವಿಕೆಗೆ ಒಳಪಟ್ಟಿತು ಎಂಬುದರ ಬಗ್ಗೆ ಮಾಹಿತಿ ದೊರಕುತ್ತದೆ.[5] ಅಂಥ ವಿವರಗಳನ್ನು ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

ಚರಿತ್ರೆಯ ರಚನೆಯಲ್ಲಿ ಸ್ಮಾರಕಗಳ ಕೊಡುಗೆಯು ಮಹತ್ತರವಾಗಿದ್ದು, ಅವು ಒಂದು ದೇಶದ ಸಂಸ್ಕೃತಿಯ ಪ್ರತಿಬಿಂಬಗಳಾಗಿವೆ. ಕೆಲವೊಮ್ಮೆ ಶಾಸನ, ನಾಣ್ಯ ಹಾಗೂ ಸಾಹಿತ್ಯಿಕ ಕೃತಿಗಳು ಹೇಳದೆ ಬಿಟ್ಟಿರುವ ಹಲವು ಅಂಶಗಳನ್ನು ಈ ಸ್ಮಾರಕಗಳಿಂದ ತಿಳಿದುಕೊಳ್ಳಬಹುದಾಗಿದೆ. ಈ ಸ್ಮಾರಕಗಳ ಅಧ್ಯಯನದಿಂದ ಜನಜೀವನದ ರೀತಿನೀತಿ ಆ ಕಾಲದ ಕಲಾ ಪ್ರಜ್ಞೆ, ಕರಕುಶಲತೆ, ಬೇರೆ ಬೇರೆ ಧರ್ಮಗಳು, ಅವುಗಳ ಪ್ರಭಾವ ಹೀಗೆ ಹಲವು ವಿಷಯಗಳನ್ನು ಅರಿತುಕೊಳ್ಳಬಹುದು.

ಹುಕ್ಕೇರಿ ಪ್ರದೇಶದಲ್ಲಿ ಹಲವು ಸ್ಮಾರಕಗಳು ಕಂಡುಬರುತ್ತವೆ. ಅವುಗಳಲ್ಲಿ ಮುಖ್ಯವಾದವು. ದೇವಾಲಯಗಳು, ಮೂರ್ತಿಶಿಲ್ಪಗಳು, ವೀರಗಲ್ಲುಗಳು, ಮಠಗಳು, ಕೋಟೆ-ಕೊತ್ತಲಗಳು ಮುಂತಾದವು ಕಂಡುಬರುತ್ತವೆ. ಇವುಗಳಿಂದ ಹುಕ್ಕೇರಿ ಪ್ರದೇಶದ ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ತಿಳಿಯಲು ಅನುಕೂಲವಾಗಿದೆ ಮತ್ತು ಅಂದಿನ ಜನರ ಕಲಾ ಪ್ರೌಢಿಮೆಗೆ ಈ ಪ್ರದೇಶದಲ್ಲಿ ರಚನೆಯಾದ ಸ್ಮಾರಕಗಳು ನಿದರ್ಶನಗಳಾಗಿವೆ. ಹುಕ್ಕೇರಿ ಪ್ರದೇಶದಲ್ಲಿನ ಶೈವ, ವೈಷ್ಣವ, ಜೈನ ಧರ್ಮಕ್ಕೆ ಸಂಬಂಧಪಟ್ಟಂತಹ ಮೂರ್ತಿಶಿಲ್ಪಗಳು ನಿಡಸೋಸಿ, ಎಲಿಮುನ್ನೋಳ್ಳಿ, ಸಂಕೇಶ್ವರ, ಸುಲ್ತಾನಪುರ, ಭೈರಾಪುರ, ಹತ್ತರಗಿ, ಪಾಚ್ಛಾಪುರ, ಬೆಳವಿ, ಬೆಲ್ಲದ ಬಾಗೇವಾಡಿ, ಅಮ್ಮಣಗಿ, ಕೋಚರಿ, ಅರ್ಜುನವಾಡ, ಹಿಡಕಲ್ ಡ್ಯಾಮ್, ಶಿರೂರು, ಮೊದಗೆ, ಯಮಕನಮರಡಿ ಹಾಗೂ ಘೋಡಗೇರಿಗಳಲ್ಲಿ ಕಂಡುಬರುತ್ತವೆ. ಈ ಗ್ರಾಮಗಳನ್ನೆಲ್ಲ ಕ್ಷೇತ್ರ ಕಾರ್ಯದ ಮೂಲಕ ಸಂದರ್ಶಿಸಿ ವಿವರಗಳನ್ನು ಅಲ್ಲಿರುವ ಮಾಹಿತಿ ಮತ್ತು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

ಆಯಾ ಕಾಲದಲ್ಲಿ ರಚನೆಗೊಂಡ ಪುರಾಣ, ಕಾವ್ಯ, ಕೃತಿ ಮುಂತಾದವುಗಳು ಆ ಕಾಲದ ಸಮಾಜದ ಚಿತ್ರಣವನ್ನು ಬಹುಮಟ್ಟಿಗೆ ಒಳಗೊಂಡಂಥವುಗಳಾಗಿದ್ದು, ಅವು ಅಂದಿನ ಜನರ ಜೀವನದ ಪ್ರತಿಂಬಿಗಳೆಂದು ಹೇಳಬಹುದು. ಪ್ರಮುಖವಾದ ಸಾಹಿತ್ಯ ಆಕರಗಳನ್ನು ಅವಶ್ಯಕತೆಯ ಹಿನ್ನೆಲೆಯಲ್ಲಿ ಅವುಗಳ ನೆರವು ಪಡೆಯಲಾಗಿದೆ.

ಸಾಹಿತ್ಯ ಆಕರಗಳನ್ನು ಎರಡು ಆಕರಗಳಾಗಿ ವಿಂಗಡಿಸಬಹುದು.

1. ದೇಶಿಯ ಸಾಹಿತ್ಯ ಆಕರಗಳು

2. ವಿದೇಶಿ ಸಾಹಿತ್ಯ ಆಕರಗಳು

ದೇಶಿಯ ಸಾಹಿತ್ಯ ಆಕರಗಳಲ್ಲಿ ಪುರಾಣಗಳು, ಕಾವ್ಯಗಳು, ರಾಮಾಯಾಣ ಮತ್ತು ಮಹಾಭಾರತದಂಥ ಬೃಹತ್ ಗ್ರಂಥಗಳೂ ಪ್ರಮುಖವಾಗಿವೆ. ದೇಶಿಯ ಸಾಹಿತ್ಯ ಆಕರಗಳು ಹೆಚ್ಚಾಗಿ ಆಯಾ ರಾಜಮನೆತನಗಳಲ್ಲಿದ್ದ ವಿವಿಧ ಅರಸರ ಕವಿಗಳ, ದಂಡನಾಯಕರು ಮತ್ತು ಸಾಮಂತ ರಾಜರುಗಳು ಮತ್ತು ರಾಣಿಯರ ಕುರಿತು ಮಾಹಿತಿಗಳು ದಾಖಲಾಗಿವೆ.

ವಿದೇಶಿ ಸಾಹಿತ್ಯ ಆಕರಗಳು ವಿದೇಶಿಯರು ಪ್ರಾಚೀನ ಕಾಲದಲ್ಲಿ ಭಾರತಕ್ಕೆ ವಿವಿಧ ಉದ್ದೇಶಗಳಿಗೋಸ್ಕರ ಪ್ರವಾಸ ಕೈಗೊಂಡು ವಿವಿಧ ಸ್ಥಳಗಳಿಗೆ ರಾಜರುಗಳಿಗೆ ಭೇಟಿ ನೀಡಿ ಅಂದಿನ ಕಾಲದ ಆಡಳಿತ ಪದ್ಧತಿ, ಜನಜೀವನ ಹಾಗೂ ಯುದ್ಧಗಳ ಬಗ್ಗೆ ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ. ಅಂಥ ಗ್ರಂಥಗಳು ಮುಖ್ಯವಾಗಿ ಭಾರತ ಮತ್ತು ವಿದೇಶಗಳ ಸಂಬಂಧಗಳ ಕುರಿತು ವಿವೇಚಿಸುತ್ತವೆ.

ಆದರೆ ಹುಕ್ಕೇರಿ ಪ್ರದೇಶದ ಇತಿಹಾಸದ ಮೇಲೆ ಬೆಳಕು ಚೆಲ್ಲುವಂತಹ ಪ್ರಾಚೀನ ಕಾಲದ ಸಾಹಿತ್ಯಕ ಆಕರಗಳು ತೀರಾ ವಿರಳ.

**ಪೂರ್ವ ಪ್ರಯತ್ನಗಳು**

ಪ್ರಸ್ತುತ ಅಧ್ಯಯನ ಕುರಿತು ಈಗಾಗಲೇ ಹಲವಾರು ವಿವರಗಳು ಪ್ರಕಟಗೊಂಡಿವೆ. ಆದರೆ ಅವುಗಳ ಪ್ರಮಾಣ ತುಂಬಾ ವಿರಳವೆಂದೆ ಹೇಳಬಹುದು. ಅವುಗಳಲ್ಲಿ ಮುಖ್ಯವಾಗಿ ಕೆಲವು ಶಾಸನಗಳು ಹಲವು ಲೇಖನಗಳು, ಜಿಲ್ಲಾ ಗೆಜೆಟಿಯರ್, ರಾಜ್ಯ ಗೆಜೆಟಿಯರ್ ಹಾಗೂ ವರ್ತಮಾನ ಪತ್ರಿಕೆಗಳಲ್ಲಿ ಈ ಭಾಗದ ಸಾಂಸ್ಕೃತಿಕ ಅಧ್ಯಯನ ವಿವರಗಳನ್ನು ಪ್ರಚುರಪಡಿಸಿದ್ದಾರೆ. ಅಂಥ ಕೆಲವು ಪ್ರಮುಖ ವಿವರಗಳನ್ನು ಈ ಪೂರ್ವಪ್ರಯತ್ನದಲ್ಲಿ ಹೇಳಲು ಬಯಸುತ್ತೇನೆ.

೧. ಬೆಳಗಾಂವ ಜಿಲ್ಲಾ ಗೆಜೆಟಿಯರ್, ಬೆಂಗಳೂರು, ೧೯೮೭.

ಕಾಮತ್ ಸೂರ್ಯನಾಥ ಅವರು ಈ ಗೆಜೆಟಿಯರ್‌ನ್ನು ಸಂಪಾದಿಸಿದ್ದಾರೆ. ಅದರಲ್ಲಿ ಈ ಪರಿಸರದ ಇತಿಹಾಸದ ಕುರಿತು ವಿವರ ನೀಡಿದ್ದಾರೆ. ಹುಕ್ಕೇರಿ ಪ್ರದೇಶವು ಮಹಮ್ಮದ್ ತೊಘಲಕ್‌ನ ಆಳ್ವಿಕೆಗೆ ಒಳಪಟ್ಟಿತ್ತು ಎಂದು ತಿಳಿದುಬರುತ್ತದೆ ಎಂಬ ಅಂಶವನ್ನು ಅವರು ಗ್ರಂಥದಲ್ಲಿ ಅಭಿಪ್ರಾಯಿಸಿದ್ದಾರೆ. ಈ ಪ್ರದೇಶವನ್ನು ನೋಡಿಕೊಳ್ಳಲು ಫತೇ ಬಹಾದೂರ್ ಎಂಬ ಅಧಿಕಾರಿಯನ್ನು ನೇಮಿಸಿರುವ ಬಗೆಗಿರುವ ವಿವರಗಳು ಪ್ರಕಟಗೊಂಡಿವೆ. ಬಿಜಾಪುರದ ಆದಿಲ್‌ಷಾಹಿಯ ಬಗೆಗೂ ಸಹ ಈ ಗೆಜೆಟಿಯರ್‌ನಲ್ಲಿ ವಿವರಗಳು ದಾಖಲಾಗಿವೆ.

೨. ಎಪಿಗ್ರಾಫಿಯಾ ಇಂಡಿಕಾ, ಸಂ. ೨೧. ದೆಹಲಿ, ೧೯೩೦-೩

ಈ ಸಂಪುಟದಲ್ಲಿ ಯಾದವ ವಂಶದದ ಕನ್ನರದೇವನ ಕ್ರಿ.ಶ. ೧೨೬೦ರ ಅರ್ಜುನವಾಡ ಶಿಲಾಶಾಸನದ ಪಠ್ಯ ಮತ್ತು ಸಾರಾಂಶವನ್ನು ಪ್ರಕಟಿಸಲಾಗಿದೆ.

೩. ಎನ್ಯುವಲ್ ರಿಪೋರ್ಟ್ ಆನ್ ಸೌಥ್ ಇಂಡಿಯನ್ ಎಪಿಗ್ರಾಫಿ ೧೯೯೨-೯೩

ಈ ರಿಪೋರ್ಟ್‌ದಲ್ಲಿ ಹುಕ್ಕೇರಿ ತಾಲೂಕಿನಲ್ಲಿ ದೊರೆತ ಶಾಸನಗಳ ಪಟ್ಟಿ, ಶಾಸನಗಳ ಕಾಲಮಾನ, ರಾಜವಂಶ, ಅರಸರ ಹಾಗೂ ಶಾಸನಗಳಲ್ಲಿರುವ ಲಿಪಿ ಮತ್ತು ಭಾಷೆಯ ಕುರಿತು ವಿವರಗಳು ದಾಖಲಾಗಿವೆ.

೪. ದೇಸಾಯಿ ಪಿ.ಬಿ., ಜೈನಿಸಮ್ ಇನ್ ಸೌತ್ ಇಂಡಿಯಾ ಆ್ಯಂಡ್ ಜೈನಾ ಎಪಿಗ್ರಾಫಿ, ಸೊಲ್ಲಾಪುರ-೧೯೫೭.

ಈ ಪುಸ್ತಕದಲ್ಲಿ ಹುಕ್ಕೇರಿಯಲ್ಲಿರುವ ಹಳೆ ಕೋರ್ಟಿನ ಹತ್ತಿರ ದೊರೆತ ಅಸ್ಪಷ್ಟವಾದ ಶಿಲಾಶಾಸನದ ಕುರಿತು ಪ್ರಸ್ತಾಪವಿದೆ.

೫. ಇಂಡಿಯನ್ ಆರ್ಕ್ಯಾಲಜಿ ಎ ರಿವ್ಹಿವ್-೧೯೬೭-೬೮

ಇದರಲ್ಲಿ ಹುಕ್ಕೇರಿ ತಾಲೂಕಿನ ಹತ್ತರಗಿ ಗ್ರಾಮದಲ್ಲಿರುವ ನಾಗರ ಮಾದರಿಯ ಶಿಖರಿ ಶೈಲಿಗೆ ಉತ್ತಮ ಉದಾಹರಣೆಯಾದ ಶಿಖರೇಶ್ವರ ದೇವಾಲಯದ ಬಗ್ಗೆ ಹಾಗೂ ಅದರ ಕಾಲಮಾನದ ಬಗ್ಗೆ ಉಲ್ಲೇಖವಿದೆ.

೬. ದೇಸಾಯಿ ಪಿ.ಬಿ., ಬಸವೇಶ್ವರ ಆ್ಯಂಡ್ ಹಿಸ್ ಟೈಮ್ಸ್ ೧೯೬೮

ಈ ಪುಸ್ತಕದಲ್ಲಿ ಅರ್ಜುನವಾಡ ಶಿಲಾಶಾಸನವನ್ನು ಆಧಾರವಾಗಿಟ್ಟುಕೊಂಡು ಬಸವಣ್ಣನವರ ವಂಶಾವಳಿ ಕವಿಳಾಸಪುರ ಒಳಗೊಂಡ ಪ್ರದೇಶದ ವಿವರಣೆ ಹಾಗೂ ಶಾಸನದ ಪ್ರತಿ ಮತ್ತು ಪಠ್ಯವನ್ನು ಪ್ರಕಟಿಸಲಾಗಿದೆ.

೭. ಗೋಪಾಲ ಬಿ.ಆರ್., ಕರ್ನಾಟಕ ಇನ್ಸ್‌ಕ್ರಿಪ್ಶನ್ಸ್ ಸಿರಿಸ್ ಸಂ, ೫, ೧೯೬೯

ಇದರಲ್ಲಿ ಸವದತ್ತಿ ರಟ್ಟರ ಕಾಲದ ಕೊಣ್ಣೂರು ಶಾಸನ ಪ್ರಕಟಿಸಲಾಗಿದೆ. ಈ ಶಾಸನದಲ್ಲಿ ಹುಕ್ಕೇರಿ ತಾಲೂಕಿನ ಗ್ರಾಮಗಳಾದ ಕೊಟಬಾಗಿ ಮತ್ತು ಘೋಡಗೇರಿಗಳ ಉಲ್ಲೇಖವಿರುತ್ತದೆ.

೮. ಹಿರೇಮಠ ಆರ್.ಸಿ. (ಸಂ), ಕರ್ನಾಟಕ ಭಾರತಿ ಸಂಪುಟ-೨, ಸಂಚಿಕೆ-೧, ೧೯೬೯

ಈ ಸಂಪುಟದಲ್ಲಿ ಆರ್.ಆರ್. ಮುತಾಲಿಕರವರು, ಅರ್ಜುನವಾಡ ಶಾಸನದಲ್ಲಿ ಉಲ್ಲೇಖಿತವಾದ ಕವಿಳಾಸಪುರದ ಕುರಿತು ಲೇಖನವಿದ್ದು ಅದರಲ್ಲಿ ಸಂಬಂಧಿಸಿದ ಶಾಸನವನ್ನು ಅಮೂಲಾಗ್ರವಾಗಿ ವಿವರಿಸಲಾಗಿದೆ. ಬಸವಣ್ಣನವರ ವಂಶಾವಳಿ ಹಾಗೂ ಕವಿಳಾಸಪುರ ಒಳಗೊಂಡ ಗ್ರಾಮಗಳು ಮತ್ತು ಹಿರಣ್ಯಕೇಶಿ ನದಿಯ ಹೆಸರನ್ನು ಉಲ್ಲೇಖಿಸಲಾಗಿದೆ.

೯. ಸುಂದರ .ಅ., ಅರ್ಲಿ ಚೇಂಬರ್ ಟೊಂಬ್ಸ ಆಫ್ ಸೌಥ್ ಇಂಡಿಯಾ-೧೯೭೫

ಈ ಗ್ರಂಥದಲ್ಲಿ ಬೆಳಗಾವಿ ಹಾಗೂ ಹುಕ್ಕೇರಿ ಪ್ರದೇಶದ ಹಲವು ಸ್ಥಳಗಳಲ್ಲಿ ಉತ್ಖನನ ಕೈಗೊಂಡಿರುವ ಮಾಹಿತಿ ಪ್ರಕಟಿಸಲಾಗಿದೆ. ಉದಾಹರಣೆಗೆ, ಹತ್ತರಗಿ, ಹೂನೂರು, ನಿರ್ವಾಣಟ್ಟಿ ಹಿಡಕಲ್, ಘೋಡಗೇರಿ ಇನ್ನೂ ಮುಂತಾದ ಸ್ಥಳಗಳಲ್ಲಿ ಉತ್ಖನನ ಕೈಗೊಂಡ ಪುರಾತತ್ವ ನೆಲೆಗಳ ಬಗ್ಗೆ ವಿವರಣೆ ಹಾಗೂ ಪಟ್ಟಿಯನ್ನು ನೀಡಲಾಗಿದೆ.

೧೦. ಸುಂಕಾಪುರ ಎಂ.ಎಸ್. (ಸಂ), ಕರ್ನಾಟಕ ಭಾರತಿ, ಸಂಪುಟ ೯, ಸಂಚಿಕೆ ೪, ೧೯೭೬.

ಈ ಸಂಪುಟದಲ್ಲಿ ಎಂ.ಎಂ. ಕಲಬುರ್ಗಿಯವರು ಬಸವಣ್ಣನವರ ವಂಶಜರು ಕವಿಳಾಸಪುರ ಪಟ್ಟಣದವರು ಎಂಬ ಸಂಶೋಧನ ಲೇಖನವನ್ನು ಬರೆದಿರುವರು. ಹುಕ್ಕೇರಿ ತಾಲೂಕಿನ ಅರ್ಜುನವಾಡ ಗ್ರಾಮದಲ್ಲಿ ಬಸವಣ್ಣನವರು ವಂಶಜರು ನೆಲೆಸಿದುದ್ದು. ಅವರು ವಂಶಾವಳಿ ಹಾಗೂ ಕವಿಳಾಸಪುರದ ಮೇರೆಗಳ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ.

೧೧. ಹಿರೇಮಠ ಆರ್.ಸಿ. ಮತ್ತು ಕಲಬುರ್ಗಿ ಎಂ.ಎಂ. ಸಂಪಾದಿಸಿರುವ ಕನ್ನಡ ಶಾಸನ ಸಂಪುಟ, ೧೯೭೬. ಇದರಲ್ಲಿ ಅರ್ಜುನವಾಡ ಶಿಲಾಶಾಸನದ ಪಠ್ಯ ಹಾಗೂ ಸಾರಾಂಶವನ್ನು ಕೊಡಲಾಗಿದೆ.

೧೨. ಡಾ. ನಾಯಕ ಹಾ.ಮಾ. (ಪ್ರ.ಸಂ.) ಕನ್ನಡ ವಿಷಯ ವಿಶ್ವಕೋಶ, ೧೯೭೯.

ಈ ಗ್ರಂಥದಲ್ಲಿ ಸಂಕೇಶ್ವರದಲ್ಲಿರುವ ಪ್ರಾಚೀನ ದೇವಾಲಯಗಳ ಬಗ್ಗೆ ಮತ್ತು ಇಲ್ಲಿ ಆಳ್ವಿಕೆ ಮಾಡಿದ ರಾಜವಂಶಗಳ ಬಗ್ಗೆ ಉಲ್ಲೇಖಿಸಿದ್ದಾರೆ. ಅದರಂತೆ ಹುಕ್ಕೇರಿ ಪ್ರದೇಶದ ಭೌಗೋಳಿಕ ಹಿನ್ನೆಲೆ ಮತ್ತು ತಾಲೂಕಿನ ಸಂಕ್ಷಿಪ್ತ ಪರಿಚಯವಿದೆ.

೧೩. ಕಾಮತ್ ಸೂರ್ಯನಾಥ ಯು. (ಸಂ), ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೩, ೧೯೮೬.

ಇದರಲ್ಲಿ ಸಂಕೇಶ್ವರ ಮತ್ತು ಹುಕ್ಕೇರಿ ಸ್ಥಳನಾಮಗಳ ಬಗೆಗೆ ಅವುಗಳ ಪ್ರಾಚೀನತೆ ಹಾಗೂ ಆಳ್ವಿಕೆ ಮಾಡಿದ ರಾಜಮನೆತನಗಳು ಅವರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳ ಬಗೆಗೆ ವಿವರಣೆ ಇದೆ.

೧೪. ಶಿವತಾರಕರ ಕೆ.ಬಿ., ಕರ್ನಾಟಕದ ಪುರಾತತ್ವ ನೆಲೆಗಳು, ೨೦೦೧.

ಸೂಚಿ ಸ್ವರೂಪದ ಈ ಗ್ರಂಥದಲ್ಲಿ ಹುಕ್ಕೇರಿ ತಾಲೂಕಿನಲ್ಲಿ ಕಂಡು ಬಂದಂತಹ ಪುರಾತತ್ವ ನೆಲೆಗಳ ಪಟ್ಟಿಯನ್ನು ಕೊಡಲಾಗಿದೆ.

೧೫. ಇತಿಹಾಸ ದರ್ಶನ, ಸಂಪುಟ ೧೩, ೧೯೯೮.

ಇದರಲ್ಲಿ ಹೆಚ್. ಜಯಮ್ಮ ಕರಿಯಣ್ಣರವರ ಸಂಶೋಧಿಸಿ ಬರೆದಿರುವ 'ಶಿಂದಿಹಟ್ಟಿಯ' ಅಪರೂಪದ ವಿಷ್ಣು ಶಿಲ್ಪಿ ಎಂಬ ಲೇಖನವಿದೆ.

೧೬. ದೇಸಾಯಿ ಬಾಬುರಾವ್ ಸುಕ್ಷೇತ್ರ ಅಮ್ಮಣಗಿ ಶ್ರೀ ಮಲ್ಲಿಕಾರ್ಜುನ ಎಂಬ ಗ್ರಂಥವನ್ನು ೧೯೯೯ರಲ್ಲಿ ಪ್ರಕಟಿಸಿದ್ದಾರೆ. ಈ ಚಿಕ್ಕ ಪುಸ್ತಕವು ಅಮ್ಮಣಗಿ ಗ್ರಾಮದ ಪ್ರಾಚೀನತೆ ಹಾಗೂ ಮಲ್ಲಿಕಾರ್ಜುನ ದೇವಾಲಯದ ವಿವರ ಮಾಹಿತಿಯನ್ನೊಳಗೊಂಡಿದೆ.

೧೭. ಬೋರಗಾಂವಕರ ಪ್ರಭಾ ಅವರು ಶ್ರೀ ದುರದುಂಡೀಶ್ವರ ಸಿದ್ಧಸಂಸ್ಥಾನ ಮಠ, ನಿಡಸೋಸಿ ಎಂಬ ವಿಷಯ ಕುರಿತು ಎಂ.ಫಿಲ್. ಸಂಶೋಧನಾ ಪ್ರಬಂಧವನ್ನು ಸಾದರಪಡಿಸಿದ್ದಾರೆ. ೨೦೦೧ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಈ ಪ್ರಬಂಧದಲ್ಲಿ ನೀಡಸೋಸಿ ಗ್ರಾಮದ ಭೌಗೋಳಿಕ ಹಿನ್ನೆಲೆ ಹಾಗೂ ಶ್ರೀ ದುರದುಂಡೀಶ್ವರ ಮಠದ ಸಂಪೂರ್ಣ ಇತಿಹಾಸವನ್ನು ದಾಖಲಿಸಿದ್ದಾರೆ. ಅವಶ್ಯಕವಾದ ಛಾಯಾಚಿತ್ರಗಳ ಮೂಲಕ ವಿವರಣೆಯನ್ನು ಕೊಟ್ಟಿರುವರು.

೧೮. ಹಂದೂರ ಬಿ.ಆರ್. ಜೈನ ಪರಂಪರೆಗೆ ಬೆಳಗಾವಿ ಪ್ರದೇಶದ ಕೊಡುಗೆ (ಪಿಎಚ್.ಡಿ. ಪ್ರಬಂಧ, ಅಪ್ರಕಟಿತ) ೨೦೦೧. ಈ ಸಂಶೋಧನೆ ಮಹಾಪ್ರಬಂಧದಲ್ಲಿ ಹುಕ್ಕೇರಿ ತಾಲೂಕಿನಲ್ಲಿ ಕಂಡುಬರುವ ಪ್ರಾಚೀನ ಜೈನ ಬಸದಿಗಳು ಹಾಗೂ ಮೂರ್ತಿಶಿಲ್ಪಗಳ ಬಗ್ಗೆ ವಿವರಣೆಗಳನ್ನು ಕಾಣಬಹುದಾಗಿದೆ.

**ವಿಧಾನ**

ಈ ಅಧ್ಯಯನವನ್ನು ಮಾಡುವಾಗ ಶಿಸ್ತು ಅಳವಡಿಸಿಕೊಳ್ಳುವುದು ಅತಿ ಮುಖ್ಯವಾಗಿರುತ್ತದೆ. ಹೀಗಾಗಿ ನಾನು ಅಧ್ಯಯನಕ್ಕೆ ಅನೇಕ ವಿಧಾನಗಳನ್ನು ಅಳವಡಿಸಿಕೊಂಡಿದ್ದೇನೆ. ಅಂತಹ ವಿಧಾನಗಳೆಂದರೆ ಕ್ಷೇತ್ರಕಾರ್ಯ. ಪ್ರಾಥಮಿಕ ಹಾಗೂ ಅನುಷಂಗಿಕ ಆಕರಗಳನ್ನು ಸಂಗ್ರಹಿಸಲಾಗಿದೆ. ಈ ಕಾರ್ಯದ ಮೂಲಕ ಸಂದರ್ಶನ ವಿಧಾನ, ಕ್ಷೇತ್ರಕಾರ್ಯ ವಿಧಾನ ಮತ್ತು ಮೌಖಿಕ ಆಕರಗಳನ್ನು ಅಳವಡಿಸಿಕೊಂಡು ಅಧ್ಯಯನವನ್ನು ಪೂರೈಸುವ ಪ್ರಯತ್ನ ಮಾಡಲಾಗಿದೆ. ಹುಕ್ಕೇರಿ ಪ್ರದೇಶದ ಸಂಸ್ಕೃತಿ, ಕಲೆ ಮತ್ತು ವಾಸ್ತುಶಿಲ್ಪ ಕುರಿತು ಪ್ರಕಟವಾಗಿರುವ ಲೇಖನಗಳು, ಪ್ರಬಂಧಗಳು ಮತ್ತು ನಿಬಂಧಗಳನ್ನು ಅವಲೋಕಿಸಿರುತ್ತೇನೆ.

ಲಭ್ಯವಿರುವ ಆಧಾರಗಳನ್ನು ಸಂಗ್ರಹಿಸಿ ವಿಷಯಗಳನ್ನು ವಿಶ್ಲೇಷಿಸಿ, ಸಂಯೋಜಿಸಿ ವ್ಯವಸ್ಥಿತವಾಗಿ ಹುಕ್ಕೇರಿ ಪರಿಸರದ ಸಾಂಸ್ಕೃತಿಕ ಅಧ್ಯಯನ ಎಂಬ ಪ್ರಬಂಧ ನಿರೂಪಣೆಗೆ ಪ್ರಯತ್ನಿಸಲಾಗಿದೆ.

**ಅಡಿ ಟಿಪ್ಪಣಿಗಳು**

1. **ಕರ್ನಾಟಕ ಇನ್ಸ್ಕ್ರಿಪಶನ್ಸ್,** ಸಂಪುಟ 5.
2. ಸವದತ್ತಿಯ ರಟ್ಟರು, ಪುಟ.77–95
3. ಅದೇ ಪುಟ.11–115
4. ಸುಂದರ ಎ., ಅರ್ಲಿ ಚೇಂಬರ್ ಟೇಂಬ್ಸ್ ಆಫ್ ಸೌತ್ ಇಂಡಿಯಾ, ಪುಟ.187–208
5. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಬೆಳಗಾವಿ ಜಿಲ್ಲೆ, ಪುಟ.169

# ಅಧ್ಯಾಯ–ಎರಡು

## ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ಹಿನ್ನೆಲೆ

ತಾಲೂಕು ಕೇಂದ್ರವಾದ ಹುಕ್ಕೇರಿ ಪಟ್ಟಣವು ಬೆಂಗಳೂರಿನಿಂದ ವಾಯುವ್ಯಕ್ಕೆ ೫೫೦ ಕಿ.ಮೀ. ದೂರದಲ್ಲಿದೆ. ಬೆಳಗಾವಿಯಿಂದ ೪೮ ಕಿ.ಮೀ. ಉತ್ತರಕ್ಕಿದೆ. ಈ ಪಟ್ಟಣವು ವಿಶಿಷ್ಟವಾದ ಸಾಂಸ್ಕೃತಿಕ ಹಿನ್ನೆಲೆಯನ್ನು ಹೊಂದಿದೆ.[೧] ಕರ್ನಾಟಕ ರಾಜ್ಯದಲ್ಲಿರುವ ಬೆಳಗಾವಿ ಜಿಲ್ಲೆಯು ಹತ್ತು ತಾಲೂಕುಗಳನ್ನು ಹೊಂದಿದೆ. ಅವುಗಳಲ್ಲಿ ಎರಡನೆಯ ಸಣ್ಣ ತಾಲೂಕು ಹುಕ್ಕೇರಿ ತಾಲೂಕು ಆಗಿದೆ. ಮೊದಲನೆಯದ್ದು ರಾಯಬಾಗ ತಾಲೂಕು. ಪ್ರಸ್ತುತ ತಾಲೂಕಿನಲ್ಲಿ ೩ ಹೋಬಳಿಗಳಿದ್ದು, ೧೨೩ ಗ್ರಾಮಗಳಿವೆ. ೫೧ ಪಂಚಾಯಿತಿಗಳಿವೆ. ೨ ಪುರಸಭೆಗಳಿವೆ. ಇದು ೯೯೧.೫ ಚ.ಕಿ.ಮೀ. ವಿಸ್ತೀರ್ಣ ಹೊಂದಿದೆ. ಜೋಳ, ತಂಬಾಕು, ಶೇಂಗಾ, ಮೆಣಸಿನಕಾಯಿ, ದ್ವಿದಳ ಧಾನ್ಯಗಳು, ಕಬ್ಬು, ಸೊಯಾಬಿನ್ ಹಾಗೂ ಎಣ್ಣೆಕಾಳುಗಳನ್ನು ಈ ಪರಿಸರದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಬೆಳೆಯಲಾಗುತ್ತದೆ. ಘಟಪ್ರಭಾ, ಹಿರಣ್ಯಕೇಶಿ, ತಾಮ್ರಪರ್ಣಿ ಮತ್ತು ಮಾರ್ಕಂಡೇಯ ನದಿಗಳು ಈ ತಾಲೂಕಿನಲ್ಲಿ ಹರಿದಿವೆ. ಪಶ್ಚಿಮ ಭಾಗವು ಮಲೆನಾಡಿನ ಸೆರಗಿನ ನಾಡಾದರೆ ಪೂರ್ವ ಭಾಗವೂ ಬಯಲು ಸೀಮೆಯ ನೆರಳಿನಲ್ಲಿದೆ. ಈ ಪ್ರದೇಶದ ಇತಿಹಾಸ ಮತ್ತು ಸಂಸ್ಕೃತಿಗಳ ಬೆಳವಣಿಗೆಯಲ್ಲಿ ಅಲ್ಲಿನ ಭೌಗೋಳಿಕ ಪರಿಸರ ಮತ್ತು ನೈಸರ್ಗಿಕ ಸಂಪತ್ತು ಬಹು ಮಹತ್ವದ ಪಾತ್ರವನ್ನು ವಹಿಸುತ್ತವೆ. ಆದ್ದರಿಂದ ಐತಿಹಾಸಿಕ ಪ್ರಕ್ರಿಯೆ ಮತ್ತು ಭೌಗೋಳಿಕ ವೈಶಿಷ್ಟ್ಯಗಳನ್ನು ಮರೆತು ಇತಿಹಾಸವನ್ನು ಬರೆಯಲು ಸಾಧ್ಯವಿಲ್ಲ. ಇವುಗಳ ಮೊರೆ ಹೋಗಲೇಬೇಕು.

ಘಟಪ್ರಭಾ ನದಿಯ ದಡಗುಂಟ ಪ್ರಾಗೈತಿಹಾಸ ನೆಲೆಗಳಾದ ಘೋಡಗೇರಿ ಹಿಡಕಲ್, ಜೀರನಾಳ ಮತ್ತು ನಿರ್ವಾಣಹಟ್ಟಿಗಳಲ್ಲಿ ಶಿಲೆಯಿಂದ ಮಾಡಿದ ಸೂಕ್ಷ್ಮ ಆಯುಧಗಳು, ಕೊಡಲಿಗಳು ಜೊತೆಗೆ ಸೂಕ್ಷ್ಮ ಉಪಕರಣಗಳು ಕಂಡು ಬಂದಿವೆ. ಮಾರ್ಕಂಡೇಯ ನದಿಯ ದಡದಲ್ಲಿ ಬೃಹತ್ ಶಿಲಾ ಕಲ್ಗೋರಿಗಳು ಮತ್ತು ಲೋಹ ಯುಗದ ಅವಶೇಷಗಳು ಹೆಚ್ಚಿನ ಪ್ರಮಾಣದಲ್ಲಿ ಕಂಡು ಬಂದಿವೆ.[೨]

ಹುಕ್ಕೇರಿ ಎಂಬ ಊರಿನ ಹೆಸರು ಹೂವಿನಕೇರಿ ಎಂಬ ಪದದಿಂದ ಬಂದುದಾಗಿದೆ. ಆದಿಲ್‌ಶಾಹಿಗಳ ಕಾಲದಲ್ಲಿ ಇಲ್ಲಿ ಉತ್ತಮ ಜಾತಿಯ ಗುಲಾಬಿ ಹೂಗಳು ಬೆಳೆಯುತ್ತಿದ್ದು, ಅವುಗಳನ್ನು ಇಲ್ಲಿಂದ ವಿಜಾಪುರಕ್ಕೆ ರವಾನಿಸಲಾಗುತ್ತಿತ್ತು.[೩] ಸ್ಥಳೀಯ ದಾಖಲೆಗಳ ಪ್ರಕಾರ ಇಲ್ಲಿನ ಇತಿಹಾಸವು ೧೪ನೆಯ ಶತಮಾನದಿಂದ ಆರಂಭವಾಗುತ್ತದೆ. ಆದರೆ ಹುಕ್ಕೇರಿ ಮತ್ತು ಅದರ ಸುತ್ತಮುತ್ತಣ ಪ್ರದೇಶದಲ್ಲಿ ಜೈನ ಮತ್ತು ಶೈವ ಪಂಥಗಳ ಪ್ರಭಾವವನ್ನು ಮೂರನೆಯ ಶತಮಾನದಿಂದಲೇ ಕಾಣಬಹುದು. ೧೩೨೭ ರಲ್ಲಿ ಈ ಪ್ರದೇಶವನ್ನು ದೆಹಲಿಯ ಸುಲ್ತಾನ

ಮಹಮ್ಮದ ಬಿನ್ ತುಘಲಕನು (೧೩೨೫-೫೧) ಗೆದ್ದುಕೊಂಡನು. ಆಗ ಹುಕ್ಕೇರಿಯಲ್ಲಿ ಅವನಿಂದ ನೇಮಿಸಲಾದ ಅಮೀರ ಎಂಬ ಅಧಿಕಾರಿಯ ಅಧೀನ ಆಡಳಿತಕ್ಕೆ ಒಳಪಟ್ಟಿತ್ತು. ಆ ಬಳಿಕ ಈ ಪ್ರದೇಶವು ಬಹುಮನಿಗಳ, ಬಿಜಾಪುರದ ಸುಲ್ತಾನರ, ಮೊಗಲರ ಮತ್ತು ಮರಾಠರ ಆಡಳಿತಕ್ಕೆ ಒಳಪಟ್ಟಿದ್ದು, ೧೮೦೬ ರಲ್ಲಿ ಬ್ರಿಟಿಷರು ಹುಕ್ಕೇರಿಯನ್ನು ವಶಪಡಿಸಿಕೊಂಡು ಅದನ್ನು ಒಂದು ತಾಲೂಕಾಗಿ ಮಾಡಿದರು. ಇಲ್ಲಿಯ ಕೋಟೆಯನ್ನು ಐನ್-ಉಲ್-ಮುಲ್ಕ್ ಗಿಲಾನಿ ಎಂಬ ಬಿಜಾಪುರದ ಸೇನಾನಿ ಕಟ್ಟಿಸಿದನು. ರುಸ್ತುಂ ಜಮಾನನು ಚೀನಿ ಗುಮ್ಮಟ ಮತ್ತು ಕದಂ ರುಸುಲ್ ಮಸೀದಿಗಳನ್ನು ೧೭ನೇ ಶತಮಾನದಲ್ಲಿ ಕಟ್ಟಿಸಿದನು. ಮರಾಠರ ಕಾಲದಲ್ಲಿ ವಂಟಮೂರಿ ದೇಸಾಯಿ ಇಲ್ಲಿಯ ಆಡಳಿತ ನೋಡಿಕೊಳ್ಳುತ್ತಿದ್ದನು. ಇಲ್ಲಿ ಹಲವಾರು ಪ್ರಾಚೀನ ಸ್ಮಾರಕಗಳಿವೆ. ಅವುಗಳಲ್ಲಿ ಮುಖ್ಯವಾದುದೆಂದರೆ ಊರಿನ ಉದ್ದಗಲದಲ್ಲಿ ಕಂಡು ಬರುವ ವಿವಿಧ ಗಾತ್ರದ ಗುಮ್ಮಟಗಳು. ಈಗ ಇಲ್ಲಿ ಬರಿ ನಾಲ್ಕು ಗುಮ್ಮಟಗಳು ಮಾತ್ರ ಉಳಿದಿವೆ. ಇವು ಮುಸ್ಲಿಂ ಶಿಲ್ಪಶೈಲಿಯ ಶ್ರೇಷ್ಠ ಸ್ಮಾರಕಗಳೆಂದು ಪರಿಗಣಿಸಲ್ಪಟ್ಟಿವೆ. ಇಲ್ಲಿ ಹಲವಾರು ನೀರಿನ ಚಿಲುಮೆಗಳಿವೆ. ಈಗ ಬರೇ ನಾಲ್ಕು ಮಾತ್ರ ಕೆಲಸ ಮಾಡುತ್ತವೆ. ಈ ಕೌತುಕಮಯ ಕಾರಂಜಿಗಳು ಅವುಗಳ ರಚನಾ ಕೌಶಲ್ಯಕ್ಕೆ ಆಂತರಿಕ ವ್ಯವಸ್ಥೆ, ನೀರಿನ ನೆಲೆ ವಿತರಣೆ ಮತ್ತಿತರ ತಾಂತ್ರಿಕ ಅಂಶಗಳು ಆಧುನಿಕ ತಂತ್ರಜ್ಞಾನಕ್ಕೆ ಸವಾಲಾಗಿವೆ. ಇವುಗಳೇ ಪಟ್ಟಣಕ್ಕೆ ನೀರು ಪೂರೈಕೆಯ ಮೂಲಗಳಾಗಿದ್ದವು. ೧೫೮೩ರ ಪರ್ಶಿಯನ್ ಮತ್ತು ಮರಾಠಿ ದಾಖಲೆಗಳ ಪ್ರಕಾರ ಒಂದು ಕಾರಂಜಿಯು ಆದಿಲ್‌ಶಾಹಿಗಳ ಕಾಲದಲ್ಲಿ ಸ್ಥಾಪಿತವಾಯಿತು.[೪]

ಈ ಪಟ್ಟಣದಿಂದ ಸುಮಾರು ಒಂದು ಕಿ.ಮೀ. ದೂರಕ್ಕೆ ಗಜಬರವಾಡಿ ಎಂಬ ಬಡಾವಣೆಯಲ್ಲಿ ಒಂದು ಮಸೀದೆ ಇದೆ. ಅಲ್ಲದೆ ಇವನ್ನೂ ೧೪೯೮ ರಲ್ಲಿ ನಂದಿ ಗ್ರಾಮದ ದೇಸಾಯಿಯಾದ ಕೇತಗೌಡನು ಮುಸ್ಲಿಂ ಸರದಾರ ಗಜಬರ ಸಾಹೇಬನ ಹೆಸರಲ್ಲಿ ಕಟ್ಟಿಸಿದ ದರ್ಗಾ ಇದೆ. ಬಣ್ಣದ ಹೆಂಚುಗಳಿಂದ ಅಲಂಕೃತವಾದ ಚೀನಿ ಗುಮ್ಮಟವು ಇಲ್ಲಿನ ಇನ್ನೊಂದು ಸ್ಮಾರಕವಾಗಿದೆ. ಇಲ್ಲಿ ಏಳು ಮಸೀದಿಗಳು, ಪೈಗಂಬರ್, ಮಹಾಸಬ್‌ತಿ ಮತ್ತು ಗಜಬರ ಸಾಹೇಬರ ಸ್ಮಾರಕಾರ್ಥವಾಗಿ ಕಟ್ಟಲಾದ ಮೂರು ದರ್ಗಾಗಳಿವೆ. ಇಲ್ಲಿನ ಪ್ರಸಿದ್ಧ ಹಿಂದೂ ದೇವಾಲಯಗಳೆಂದರೆ, ಪ್ರಾಚೀನವಾದ ಲಕ್ಷ್ಮೀ ದೇವಾಲಯವು ಇತ್ತೀಚೆಗೆ ದುರಸ್ತಿಗೊಂಡಿದೆ. ಅಲ್ಲದೆ ವಿಜಯನಗರ ಆಡಳಿತಾವಧಿಯ ಪೂರ್ವದಲ್ಲಿಯೇ ಆದಿನಾಥನಿಗಾಗಿ ಕಟ್ಟಿದ ಜಿನಾಲಯವಿದೆ.[೫] ಇಲ್ಲಿ ಮೂರು ವೀರಶೈವ ಮಠಗಳಿವೆ. ಹಾಗೂ ಅರ್ಜುನವಾಡ ಗ್ರಾಮದಲ್ಲಿ ಬಸವೇಶ್ವರ ಹಾಗೂ ಅವರ ವಂಶಾವಳಿಯನ್ನು ಉಲ್ಲೇಖಿಸಿರುವ ಶಿಲಾಶಾಸನ ದೊರೆತಿದೆ. ಅಗರಬತ್ತಿ ಕೈಗಾರಿಕೆಗೆ ಈ ಸ್ಥಳ ಪ್ರಸಿದ್ಧವಾಗಿದೆ ಎಂದು ಹೇಳಬಹುದು.

## ಮೇಲ್ಮೈ ಲಕ್ಷಣಗಳು

### ೧. ವಿಸ್ತೀರ್ಣ ಮತ್ತು ಮೇರೆಗಳು

ಹುಕ್ಕೇರಿ ತಾಲೂಕಿನ ಒಟ್ಟು ವಿಸ್ತೀರ್ಣ ೯೯೧.೯೫ ಚ.ಕಿ.ಮೀ.ಗಳು. ತಾಲೂಕಿನ ಪಶ್ಚಿಮ ಭಾಗವು ಸಮುದ್ರ ಮಟ್ಟದಿಂದ ೨೭೩೦ ಅಡಿ ಗಳಷ್ಟು ಎತ್ತರವಾಗಿದ್ದು, ಪೂರ್ವಕ್ಕೆ ಹೋದಂತೆಲ್ಲಾ ಇಳಿಜಾರಾಗಿರುತ್ತದೆ. ಈ ತಾಲೂಕು ಸಮುದ್ರ ಮಟ್ಟದಿಂದ ೨೩೪೦ ಅಡಿಗಳಷ್ಟು

ಎತ್ತರವಾಗಿರುತ್ತದೆ.[೬] ಘಟಪ್ರಭಾ ಹಿರಣ್ಯಕೇಶಿ, ತಾಮ್ರಪರ್ಣಿ, ಮಾರ್ಕಂಡೇಯ ನದಿಗಳು ಹುಕ್ಕೇರಿ ತಾಲೂಕಿನಲ್ಲಿ ಹರಿದಿವೆ. ಘಟಪ್ರಭಾ ನದಿಗೆ ಹಿಡಕಲ್ ಹತ್ತಿರ ಬೃಹತ್ ಆಣೆಕಟ್ಟು ಕಟ್ಟಿ ಜಲಾಶಯ ಮಾಡಿದ್ದಾರೆ. ಆದರೆ ಇದರ ನೀರು ಹುಕ್ಕೇರಿ ತಾಲೂಕಿಗೆ ದಕ್ಕದೇ ಹೆಚ್ಚಿನ ಲಾಭವೂ ನೆರೆಯ ತಾಲೂಕುಗಳಿಗೆ ಸೇರುತ್ತದೆ. ಹಿರಣ್ಯಕೇಶಿ ನದಿಗೆ ಅಲ್ಲಲ್ಲಿ ಬ್ಯಾರೇಜಗಳನ್ನು ನಿರ್ಮಿಸಿ ನೀರು ನಿಲ್ಲಿಸಿ ವಿದ್ಯುತ್ ಮೂಲಕ ನೀರೆತ್ತಿ ಹೊಲಗಳಿಗೆ ಬಳಸಿ ಫಲವತ್ತಾದ ಬೆಳೆಯ ಫಸಲು ಪಡೆಯುತ್ತಿದ್ದಾರೆ. ಹುಕ್ಕೇರಿ ತಾಲೂಕಿನ ಪೂರ್ವಕ್ಕೆ ಗೋಕಾಕ, ಉತ್ತರಕ್ಕೆ ಚಿಕ್ಕೋಡಿ, ಪಶ್ಚಿಮಕ್ಕೆ ಮಹಾರಾಷ್ಟ್ರದ ಗಡಂಗ್ಲಜ ಹಾಗೂ ದಕ್ಷಿಣಕ್ಕೆ ಬೆಳಗಾವಿ ತಾಲೂಕುಗಳು ಇವು ಹುಕ್ಕೇರಿ ಮೇರೆಗಳಾಗಿವೆ.[೭]

**೨. ಜನಸಂಖ್ಯೆ**

೨೦೧೧ರ ಜನಗಣತಿಯ ಪ್ರಕಾರ ಹುಕ್ಕೇರಿ ತಾಲೂಕಿನ ಒಟ್ಟು ಜನಸಂಖ್ಯೆ ೩,೫೨,೧೯೩ ಇದೆ. ಇದರಲ್ಲಿ ಗಂಡು ೧,೮೧,೫೭೮ ಹೆಣ್ಣು ೧,೭೫,೬೧೪ ಇದೆ. ಹೆಣ್ಣು ಮಕ್ಕಳಿಗಿಂತ ಹೆಚ್ಚಾಗಿ ಗಂಡಸರ ಸಂಖ್ಯೆ ೫೯೬೭೫ ಇದೆ. ಪ್ರತಿ ಚ.ಕಿ.ಮೀ.ಗೆ ೨೬೦ ಜನ ಇರುತ್ತಾರೆ ಮತ್ತು ಸಾಕ್ಷರತೆಯ ಪ್ರಮಾಣ ಗಂಡು ೫೮.೯೯% ಹೆಣ್ಣು ೪೯.೧೫% ಒಟ್ಟು ೯೨.೦೯% ರಷ್ಟು ಶಿಕ್ಷಣ ಹೊಂದಿದ್ದಾರೆ ಎಂದು ಹೇಳಬಹುದು.[೮] ಹುಕ್ಕೇರಿ ತಾಲೂಕನ್ನು ಆಡಳಿತದ ಅನುಕೂಲಕ್ಕಾಗಿ ಮೂರು ಹೋಬಳಿಗಳನ್ನಾಗಿ ವಿಂಗಡಿಸಲಾಗಿರುತ್ತದೆ. ೧. ಹುಕ್ಕೇರಿ ೨. ಸಂಕೇಶ್ವರ ಮತ್ತು ೩. ಯಮಕನಮರಡಿ.[೯]

**ಹವಾಗುಣ–ಮಳೆ**

ಹುಕ್ಕೇರಿ ತಾಲೂಕಿನ ಪಶ್ಚಿಮ ಭಾಗವೂ ಮಲೆನಾಡಿನ ಸೆರಗಿನ ನಾಡಾಗಿದ್ದರೆ, ತಾಲೂಕಿನ ಪೂರ್ವಭಾಗವು ಬಯಲು ನಾಡಿನ ನೆರಳಿನಲ್ಲಿದೆ. ಮಳೆ ಕಡಿಮೆ. ನೀರಾವರಿ ಭೂಮಿ ಹೆಚ್ಚಾಗಿ ಸಮತಟ್ಟದಲ್ಲಿಯೂ ಇದೆ. ಗುಡ್ಡ ಬೆಟ್ಟಗಳು ಇರದ ಭೂಮಿ. ಇಲ್ಲಿ ಬೃಹತ್ ಕೆರೆಗಳು ಇವೆ.[೧೦]

**೪. ಕೆರೆಗಳು**

ಇಲ್ಲಿಯ ಕೆರೆಗಳು ನದಿ ಪ್ರದೇಶ ಹೊರತುಪಡಿಸಿ ಗ್ರಾಮೀಣ ಭಾಗದ ಎತ್ತರ ಪ್ರದೇಶಗಳಲ್ಲಿ ನಿರ್ಮಾಣವಾಗಿವೆ. ಕೆರೆಗಳು ಆದಿಕಾಲದಿಂದ ನೀರಿನ ಆಗರಗಳಾಗಿ ಜನರಿಗೆ, ಪ್ರಾಣಿಗಳಿಗೆ ಜಲಮೂಲಗಳಾಗಿವೆ. ಕೆರೆಗಳ ಭಾಗಗಳಲ್ಲಿ ನೀರಾವರಿ ಒದಗಿಸಿವೆ. ಕೆರೆಗಳಿಂದಲೂ ಅಂತರ್ಜಲ ಮಟ್ಟ ಏರಿಕೆಯಾಗುತ್ತದೆ. ಪ್ರತಿಯೊಂದು ಊರಿಗೂ ಕೆರೆಗಳಿವೆ. ಹಿಂದಿನ ರಾಜರು, ಸಂಸ್ಥಾನಿಕರು ವಿಶೇಷವಾಗಿ ಕೆರೆಗಳನ್ನು ಕಟ್ಟುತ್ತಿದ್ದರು. ಈ ತಾಲೂಕಿನ ಪ್ರಮುಖ ಕೆರೆಗಳಲ್ಲಿ ಕಮತನೂರ, ಕಣಗಲಿ, ಕೋಣನಕೆರೆ, ಶಹಾಬಂದರ, ಹರಗಾಪೂರ, ಬಸ್ಸಾಪೂರ, ಅರಳೀಕಟ್ಟಿ, ರಾಜಕಟ್ಟಿ, ಮಾವನೂರ, ಹೊಸೂರು, ಗುಟಗುದ್ದಿ, ಬೈರಾಪೂರ, ಮತ್ತಿವಾಡ, ಹಿಟ್ನಿ, ಗುಡಸ, ಝುಂಗಟಿಹಾಳ, ಗೌಡಾಡ, ಕೊಟಬಾಗಿ ಕೆರೆಗಳು ಪ್ರಮುಖವಾಗಿವೆ. ಕೆರೆಗಳನ್ನು ಕಟ್ಟಿಸಲು ಅನೇಕರು ಅನೇಕ ರೀತಿಯ ತ್ಯಾಗಗಳನ್ನು ಮಾಡಿದ ಉದಾಹರಣೆಗಳಿವೆ. ಕೆರೆ ಕಟ್ಟಿಸಿದ ಐತಿಹ್ಯಗಳು, ಶಿಲಾಲಿಪಿಗಳು ಇಂದಿಗೂ ಲಭ್ಯ ಇವೆ. ಕೆರೆಗಳು ಆದಿ ಕಾಲದಿಂದಲೂ ಇತ್ತೀಚಿನವರೆಗೂ ಜಲಮೂಲಗಳಾಗಿರುವುದನ್ನು ನಾವು ಇಂದಿಗೂ ಕಾಣುತ್ತೇವೆ. ಹುಕ್ಕೇರಿ ತಾಲೂಕು ಬೃಹತ್

ಜಲಾಶಯಗಳಿಂದ, ಚಿಕ್ಕ ಚಿಕ್ಕ ಏತ 'ನೀರಾವರಿ, ಕೆರೆಗಳಿಂದ ಹಾಗೂ ಹರಿಯುವ ನದಿಗಳಿಂದ ಸಮೃದ್ಧ ನಾಡಾಗಿರುತ್ತದೆ.[೧೧]

### ೫. ಜಲಸಂಪನ್ಮೂಲಗಳು

ಘಟಪ್ರಭಾ, ಹಿರಣ್ಯಕೇಶಿ, ತಾಮ್ರಪರ್ಣಿ, ಮಾರ್ಕಂಡೇಯ ನದಿಗಳು ಹುಕ್ಕೇರಿ ತಾಲೂಕಿನಲ್ಲಿ ಹರಿದಿವೆ. ಅವುಗಳಲ್ಲಿ ಅತಿ ಪ್ರಮುಖವಾದುದು ಘಟಪ್ರಭಾ ನದಿಯಾಗಿದೆ. ಈ ನದಿಯು ಸಹ್ಯಾದ್ರಿ ಶ್ರೇಣಿಯ ಅಂಬೋಲಿ ಹತ್ತಿರ ಹುಟ್ಟಿ ಪೂರ್ವಾಭಿಮುಖವಾಗಿ ಹರಿಯುತ್ತಿದ್ದು ಸುಮಾರು ೬೦ ಕಿ.ಮೀ.ಗಳಷ್ಟು ದೂರ ಹುಕ್ಕೇರಿಯ ತಾಲೂಕಿನಲ್ಲಿ ಹರಿಯುತ್ತಿದೆ. ತಾಮ್ರಪರ್ಣಿ ಮತ್ತು ಹಿರಣ್ಯಕೇಶಿ ಇದರ ಉಪನದಿಗಳಾಗಿವೆ ಮತ್ತು ಘಟಪ್ರಭಾ ನದಿಗೆ ಹಿಡಕಲ್ ಹತ್ತಿರ ಬೃಹತ್ ಆಣೆಕಟ್ಟು ಕಟ್ಟಿ ಜಲಾಶಯ ಕಟ್ಟಿದ್ದಾರೆ. ಈ ಜಲಾಶಯವು ೧೦,೧೮೩ ಉದ್ದವಾಗಿದೆ ಹಾಗೂ ೫೩೩೫ ಮೀ. ಎತ್ತರವಿದೆ (೧೬೩ ಅಡಿ). ಜಲಾಶಯದ ಒಟ್ಟು ಸಂಗ್ರಹಣೆ ಸಾಮರ್ಥ್ಯ ೧೪೪೩ ಮಿಲಿಯ ಘನಮೀಟರ (೫೧ ಟಿ.ಎಂ.ಸಿ.) ಗಳಷ್ಟಿದೆ. ಜೊತೆಗೆ ಘಟಪ್ರಭಾ ಜಲಾಶಯದ ಯೋಜನೆಯು ೩೨ ಮೆಗ್ಯಾವ್ಯಾಟ್ ವಿದ್ಯುತ್ ಉತ್ಪಾದನೆಯ ಗುರಿ ಹೊಂದಿದೆ. ಬಲದಂಡೆ ಕಾಲುವೆ ೨೦೨ ಕಿ.ಮೀ. ಹರಿದಿದ್ದು, ಎಡದಂಡೆ ಕಾಲುವೆ ೨೦೯ ಕಿ.ಮೀ. ಹರಿದಿದೆ ಮತ್ತು ಬಲದಂಡೆ ಕಾಲುವೆಯಿಂದ ೧,೦೧,೮೦೩ ಹೆಕ್ಟೇರ್ ಜಮೀನು ನೀರಿನ ಸೌಲಭ್ಯ ಪಡೆದಿದೆ. ಎಡದಂಡೆಯಿಂದ ೧,೬೧,೮೭೧ ಹೆಕ್ಟೇರ್ (೪,೦೦,೦೦೦೦ ಎಕರೆ) ನೀರಾವರಿಯಾಗಿದೆ. ಚಿಕ್ಕೋಡಿ ಶಾಖಾ ಕಾಲುವೆಯಿಂದ ೮೬ ಕಿ.ಮೀ.ವರೆಗೆ ೮೪,೪೦೦ ಎಕರೆ ನೀರಾವರಿಯಾಗಿದೆ. ಕುರಣಿ ಏತ ನೀರಾವರಿ ಯೋಜನೆಯಿಂದ ೯೬೩೭ ಎಕರೆ ನೀರಾವರಿಯಾಗಿದೆ. ಕೋಚರಿ ಏತ ನೀರಾವರಿ ಯೋಜನೆಯಿಂದ ೪೫೦೦ ಎಕರೆ ಕ್ಷೇತ್ರಕ್ಕೆ ನೀರಾವರಿಯನ್ನು ಒದಗಿಸಲಾಗಿದೆ. ಈ ಪ್ರದೇಶದಲ್ಲಿ ವ್ಯವಸಾಯಕ್ಕೆ ನೀರು ಒದಗಿಸುವ ಪ್ರಮುಖ ಆಣೆಕಟ್ಟಾಗಿರುತ್ತದೆ.[೧೨]

ಮಾರ್ಕಂಡೇಯ ನದಿಯು ಘಟಪ್ರಭಾ ನದಿಯ ಮುಖ್ಯ ಉಪನದಿಯಾಗಿದ್ದು ಪಶ್ಚಿಮ ಘಟ್ಟಗಳಲ್ಲಿ ಬೇಲೂರು ಹತ್ತಿರ ಉಗಮವಾಗಿ ೬೬ ಕಿ.ಮೀ.ವರೆಗೆ ಹರಿದು ಗೋಕಾಕ ಪಟ್ಟಣದ ಪಶ್ಚಿಮ ದಿಕ್ಕಿನಲ್ಲಿ ಘಟಪ್ರಭಾ ನದಿಯನ್ನು ಕೂಡುತ್ತದೆ. ಈ ನದಿಯು ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯಲ್ಲಿ ಪೂರ್ಣವಾಗಿ ಹರಿಯುತ್ತದೆ. ಹುಕ್ಕೇರಿ ತಾಲೂಕಿನ ಶಿರೂರು, ಗ್ರಾಮದ ಹತ್ತಿರ ನದಿಗೆ ಎರಡು ಗುಡ್ಡಗಳ ಮಧ್ಯದಲ್ಲಿ ಅಡ್ಡಲಾಗಿ ಆಣೆಕಟ್ಟು ಕಟ್ಟಲಾಗಿದೆ. ಎಡಬದಿ ಹಾಗೂ ಬಲಬದಿಗಳಲ್ಲಿ ಎರಡು ಕಾಲುವೆಗಳನ್ನು ನಿರ್ಮಿಸಲಾಗಿದೆ. ಇದರಿಂದ ಬೆಳಗಾವಿ ಜಿಲ್ಲೆಯ ಹುಕ್ಕೇರಿ, ಬೆಳಗಾವಿ, ಗೋಕಾಕ, ಸವದತ್ತಿ ತಾಲೂಕುಗಳಲ್ಲಿ ಒಟ್ಟು ೧೯೦೫ ಹೆಕ್ಟೇರ್ (೪೭,೨೦೭ ಎಕರೆ) ಕ್ಷೇತ್ರವು ನೀರಾವರಿಗೆ ಒಳಪಟ್ಟಿರುತ್ತದೆ. ಮತ್ತೊಂದು ಉಪನದಿಯಾದ ತಾಮ್ರಪರ್ಣಿ ನದಿಯು ದಡ್ಡಿ ಎಂಬ ಪ್ರದೇಶದಲ್ಲಿ ಘಟಪ್ರಭಾ ನದಿಯನ್ನು ಸೇರುತ್ತದೆ. ಇನ್ನೊಂದು ಉಪನದಿಯಾದ ಹಿರಣ್ಯಕೇಶಿ ನದಿಯು ಇಂಗಳಗಿ ಗ್ರಾಮದ ಹತ್ತಿರ ಘಟಪ್ರಭಾ ನದಿಯನ್ನು ಸೇರುತ್ತದೆ. ಈ ಹಿರಣ್ಯಕೇಶಿ ನದಿಯು ಮಹಾರಾಷ್ಟ್ರದ ಅಜರಾ ಹತ್ತಿರ ಹುಟ್ಟಿ ಹುಕ್ಕೇರಿ ತಾಲೂಕಿನ ಮಧ್ಯಭಾಗದಲ್ಲಿ ಸುಮಾರು ೩೦ ಕಿ.ಮೀ.ಗಳಷ್ಟು ಹರಿಯುತ್ತದೆ. ಘಟಪ್ರಭಾ ಮತ್ತು ಹಿರಣ್ಯಕೇಶಿ ನದಿಗಳು ವರ್ಷದಲ್ಲಿ ಎಂಟು ತಿಂಗಳು ತುಂಬಿ ಹರಿಯುತ್ತವೆ. ಘಟಪ್ರಭಾ ಉತ್ತರ ಕರ್ನಾಟಕಕ್ಕೆ ಭಾಗ್ಯಲಕ್ಷ್ಮಿಯಾದರೆ ಹಿರಣ್ಯಕೇಶಿ

ಹುಕ್ಕೇರಿ ತಾಲೂಕು ಪ್ರದೇಶದ ಭಾಗ್ಯನಿಧಿಯಾಗಿದೆ ಅಂತ ಹೇಳಬಹುದು. ಈ ನದಿಗಳಿಂದ ಇಲ್ಲಿ ಏತ ನೀರಾವರಿಯನ್ನು ಮಾಡಲಾಗಿದೆ. ಮಳೆಗಾಲದಲ್ಲಿ ಮಳೆ ನೀರನ್ನು ನದಿ, ಹಳ್ಳ, ಕೊಳ್ಳ, ತಗ್ಗು ಪ್ರದೇಶಗಳಲ್ಲಿ ತಡೆಗೋಡೆ ನಿರ್ಮಿಸಿ ನೀರನ್ನು ಸಂಗ್ರಹಣೆ ಮಾಡುವ ಯೋಜನೆ ಕೂಡಾ ಇದೆ. ಬಾಂದಾರುಗಳಿಂದ ಭೂಮಿಯಲ್ಲಿನ ನೀರಿನ ಮಟ್ಟ ಏರಿಕೆಯಾಗಿ ಬಾವಿಗಳಿಗೆ ಕೊಳವೆ ಬಾವಿಗಳಿಗೆ ನೀರು ಹೆಚ್ಚಾಗುತ್ತದೆ. ಇದರಿಂದ ನೀರಾವರಿ ಹೆಚ್ಚಾಗುತ್ತದೆ ಮತ್ತು ನದಿ ಪ್ರದೇಶ ಹೊರತುಪಡಿಸಿ ಗ್ರಾಮೀಣ ಎತ್ತರ ಪ್ರದೇಶಗಳಲ್ಲಿ ಕೆರೆಗಳು ಆದಿಕಾಲದಿಂದ ನೀರಿನ ಆಗರಗಳಾಗಿ ಜನರಿಗೆ ಪ್ರಾಣಿಗಳಿಗೆ ಜಲಮೂಲಗಳಾಗಿವೆ.[13]

**ವ್ಯವಸಾಯ**

ಹುಕ್ಕೇರಿ ತಾಲೂಕಿನ ಜನರ ಹೆಚ್ಚಿನ ಉದ್ಯೋಗ ವ್ಯವಸಾಯವಾಗಿದೆ. ವ್ಯವಸಾಯ ಮಾಡಲಿಕ್ಕೆ ಎಲ್ಲ ಗ್ರಾಮಗಳಲ್ಲಿ ನೀರಿನ ಹಂಚಿಕೆ ಒಂದೇ ಸಮವಾಗಿಲ್ಲ. ಕೆಲವು ಪ್ರದೇಶಗಳಲ್ಲಿ ರೈತರು ಮಳೆಯನ್ನು ಅವಲಂಬಿಸಿ ಕೃಷಿ ಮಾಡುತ್ತಾರೆ. ಇನ್ನೂ ಕೆಲವು ಪ್ರದೇಶಗಳಲ್ಲಿ ನದಿಯ ನೀರನ್ನು ಮತ್ತು ಜಲಾಶಯ, ಕೆರೆಯ ನೀರನ್ನು ಕೃಷಿಗೆ ಬಳಸುತ್ತಾರೆ. ಈ ಪ್ರದೇಶವು ಕಪ್ಪು ಮತ್ತು ಕೆಂಪು ಭೂಮಿಯನ್ನು ಹೊಂದಿದೆ. ಕಪ್ಪು ಭೂಮಿಯು ಈ ತಾಲೂಕು ಪ್ರದೇಶದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಕೆಂಪು ಭೂಮಿ ಪಶ್ಚಿಮ ಭಾಗ ಅಂದರೆ ಮಹಾರಾಷ್ಟ್ರದ ಗಡಿ ಭಾಗದಲ್ಲಿ ಮಾತ್ರ ಹೆಚ್ಚಾಗಿ ಕಂಡು ಬರುತ್ತದೆ. ಕಪ್ಪು ಮಣ್ಣಿನ ಪ್ರದೇಶವು ಬೆಳೆಯನ್ನು ಬೆಳೆಯಲು ಹೆಚ್ಚು ಫಲವತ್ತತೆಯನ್ನು ಹೊಂದಿರುತ್ತದೆ. ಕಪ್ಪು ಮಣ್ಣಿನಲ್ಲಿ ವಾಣಿಜ್ಯ ಬೆಳೆಗಳನ್ನು ಹೆಚ್ಚಾಗಿ ಬೆಳೆಯುತ್ತಾರೆ. ಅವುಗಳೆಂದರೆ ಕಬ್ಬು, ಜೋಳ, ಹತ್ತಿ, ತಂಬಾಕು, ಶೇಂಗಾ, ಮೆಣಸಿನಕಾಯಿ ಮುಂತಾದ ಧಾನ್ಯಗಳನ್ನು ಬೆಳೆಯುತ್ತಾರೆ. ಆದರೆ ಕೆಂಪು ಮಣ್ಣಿನಲ್ಲಿ ಕಪ್ಪು ಮಣ್ಣಿನಲ್ಲಿರುವಷ್ಟು ಫಲವತ್ತತೆ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುವುದಿಲ್ಲ. ಇಲ್ಲಿಯೂ ಕೂಡಾ ಕಪ್ಪು ಮಣ್ಣಿನಲ್ಲಿ ಬೆಳಯುವಂತಹ ಬೆಳೆಗಳನ್ನು ಬೆಳೆಯುತ್ತಾರೆ. ಆದರೆ ಕಪ್ಪು ಭೂಮಿಯು ಹೆಚ್ಚಿನ ಫಲವತ್ತೆಯನ್ನು ಹೊಂದಿದೆ ಎಂದು ಹೇಳಬಹುದು.

**ಕೈಗಾರಿಕೆಗಳು**

ಹುಕ್ಕೇರಿಯ ತಾಲೂಕಿನಲ್ಲಿ ಸಕ್ಕರೆ ಕೈಗಾರಿಕೆಯೊಂದು ಅತಿ ಪ್ರಮುಖವಾಗಿದೆ. ಉಳಿದವುಗಳು ಮಧ್ಯಮ ಪ್ರಮಾಣದ ಹಾಗೂ ಸಣ್ಣ ಪ್ರಮಾಣದ ಕೈಗಾರಿಕೆಗಳು ಅಲ್ಲದೆ ಊದಬತ್ತಿ ತಯಾರಿಕೆ, ಬೀಡಿ ಕಟ್ಟವುದು, ಕಂಬಳಿ ನೇಯ್ಗೆ, ಬುಟ್ಟಿ ಮಾಡುವುದು, ಇನ್ನೂ ಮುಂತಾದ ಕೈಗಾರಿಕೆಗಳಾಗಿರುತ್ತವೆ. ಹುಕ್ಕೇರಿ ಮತ್ತು ಪಾಶ್ಚಾಪುರ ಇವು ಊದಬತ್ತಿ ತಯಾರಿಕೆಯಲ್ಲಿ ಪ್ರಸಿದ್ಧಿ ಪಡೆದಿವೆ. ಈ ಊರುಗಳಲ್ಲಿರುವ ಹೆಚ್ಚಿನ ಜನರ ಮೂಲ ಉದ್ಯೋಗ ಊದಬತ್ತಿ ತಯಾರಿಸುವುದು ಎಂದು ಹೇಳಿದರೆ ತಪ್ಪಾಗಲಾರದು.

ಈ ತಾಲೂಕಿನಲ್ಲಿ ಶ್ರೀ ಹಿರಣ್ಯಕೇಶಿ ಸಹಕಾರಿ ಸಕ್ಕರೆ ಕಾರ್ಖಾನೆ ೧೯೫೬ ರಲ್ಲಿ ಪ್ರಾರಂಭವಾಗಿ ಕರ್ನಾಟಕದಲ್ಲಿ ಅಷ್ಟೇ ಅಲ್ಲದೆ ಇಡೀ ಭಾರತದಲ್ಲಿಯೇ ಸಹಕಾರಿ ಕ್ಷೇತ್ರದಲ್ಲಿ ನಡೆಯುವ ಶ್ರೇಷ್ಠ ಸಕ್ಕರೆ ಕಾರ್ಖಾನೆಯಾಗಿದೆ.[೧೪] ಈ ತಾಲೂಕಿನ ಹೆಬ್ಬಾಳ ಗ್ರಾಮವು ತಂಬಾಕು ವ್ಯಾಪಾರ ವಹಿವಾಟು ನಡೆಸುವ ಪ್ರಮುಖ ಕೇಂದ್ರವಾಗಿರುತ್ತದೆ. ಮಣಗುತ್ತಿ ಗ್ರಾಮದಲ್ಲಿ ಘಟಪ್ರಭಾ, ಪೇಪರ ಬೋರ್ಡ್ ಕಾರ್ಖಾನೆಯಿಂದ ರಟ್ಟು ಮತ್ತು ಪೇಪರಗಳನ್ನು

ತಯಾರಿಸಲಾಗುತ್ತದೆ. ಪ್ರಸ್ತುತ ಈ ತಾಲೂಕಿನಲ್ಲಿ ಹಿಡಕಲ್ ಡ್ಯಾಮ್ ಹಾಗೂ ಬೆಲ್ಲದ ಬಾಗೇವಾಡಿ ಗ್ರಾಮಗಳಲ್ಲಿ ಹೊಸ ಸಕ್ಕರೆ ಕಾರ್ಖಾನೆಗಳು ಪ್ರಾರಂಭವಾಗಿವೆ.[೧೫]

## ಚಾರಿತ್ರಿಕ ಹಿನ್ನಲೆ

ಹುಕ್ಕೇರಿ ಪರಿಸರವು ಪ್ರಾಚೀನ ಕಾಲದಿಂದಲೂ ತನ್ನದೇ ಆದ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದ ಪ್ರಮುಖ ಐತಿಹಾಸಿಕ ತಾಣವಾಗಿದೆ. ಕನ್ನಡ ನಾಡಿನಲ್ಲಿ ವಿಶೇಷ ಹಿರಿಮೆಯನ್ನು ಮತ್ತು ಸ್ಥಾನಮಾನಗಳನ್ನು ಅಂದಿನಿಂದ ಇಂದಿನವರೆಗೂ ಪಡೆದುಕೊಂಡು ಬಂದಿದೆ. ರಾಜರ ಪ್ರಮುಖ ಆಡಳಿತ ಪ್ರದೇಶವಾಗಿ, ದಂಡನಾಯಕರ ಪಾಳೆಯದ ಊರಾಗಿ, ಶತ್ರುಗಳ ಲಗ್ಗೆಗಳುಕದ ಕೋಟೆ, ಕೊತ್ತಲಗಳ ಭದ್ರಸ್ಥಾನವಾಗಿ ಮೆರೆದ ಈ ಪ್ರದೇಶ ಬಹುಕಾಲದವರೆಗೆ ರಾಜರ ಬೀಡಾಗಿತ್ತು.

ಈಗಿನ ಹುಕ್ಕೇರಿ ತಾಲೂಕು ಪರಿಸರದ ಬಹುಭಾಗವನ್ನೊಳಗೊಂಡ ಪ್ರದೇಶವು ಈ ಹಿಂದೆ ಕೂಹುಂಡಿ-೩೦೦೦ ಆಡಳಿತ ಪ್ರದೇಶದಲ್ಲಿ ವಿಸ್ತರಿಸಿಕೊಂಡಿತ್ತು. ಹೀಗಾಗಿ ಈ ಪ್ರದೇಶವನ್ನು ಕೂಹೂಡಂಬನಾಡು ಎಂದು ಕರೆಯಲಾಗುತ್ತಿತ್ತು.

ಹುಕ್ಕೇರಿ ಪರಿಸರಕ್ಕೆ ರಾಜಕೀಯ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನಮಾನವಿದೆ. ಈ ಪ್ರದೇಶದಲ್ಲಿ ಮುಖ್ಯವಾಗಿ ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ಗಂಗರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ಸವದತ್ತಿ ರಟ್ಟರು, ಕೊಲ್ಲಾಪುರದ ಶಿಲಾಹಾರರು, ಗೋವೆಯ ಕದಂಬರು ಹಾಗೂ ಸೇಂದ್ರಕರು, ಪೇಶ್ವೆಗಳು, ದೆಹಲಿ ಸುಲ್ತಾನರು, ವಿಜಯನಗರ, ಬಹುಮನಿ ಸುಲ್ತಾನರು ಮತ್ತು ಬಿಜಾಪುರದ ಅದಿಲ್‌ಶಾಹಿ ಅರಸು ಮನೆತನಗಳು ಆಳ್ವಿಕೆ ನಡೆಸಿದವು. ಅವು ತಮ್ಮದೇ ಆದ ಕೊಡುಗೆಯನ್ನು ಸಮರ್ಪಿಸಿ ಹುಕ್ಕೇರಿಯ ಇತಿಹಾಸ ಮತ್ತು ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದ್ದನ್ನು ನಾವು ಪ್ರದೇಶದ ಚರಿತ್ರೆಯುದ್ದಕ್ಕೂ ಗಮನಿಸಬಹುದಾಗಿದೆ.

ಪ್ರಸ್ತುತ ಈ ಅಧ್ಯಾಯದಲ್ಲಿ ಹುಕ್ಕೇರಿ ಪ್ರಾದೇಶಿಕ ರಾಜಕೀಯ ಚರಿತ್ರೆ ಮಾಹಿತಿ ನೀಡುವ ಕೆಲವು ಶಾಸನಗಳು ಲಭ್ಯವಾಗಿದ್ದು ಅವುಗಳು ನೀಡುವ ಮಾಹಿತಿಗನುಗುಣವಾಗಿಯೇ ಪ್ರಾಚೀನ ಮತ್ತು ಮಧ್ಯಕಾಲೀನ ಅವಧಿಯಲ್ಲಿ ಹುಕ್ಕೇರಿ ಪ್ರದೇಶವನ್ನು ಆಳಿದ ಆಯಾ ಅರಸು ಮನೆತನಗಳು ಹಾಗೂ ಸಾಮಂತ ಅರಸರ ರಾಜಕೀಯ ಚರಿತ್ರೆಯನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ.

## ಪ್ರಮುಖ ಅರಸು ಮನೆತನಗಳು

### ೧. ಕಲ್ಯಾಣದ ಚಾಲುಕ್ಯರು

ರಾಷ್ಟ್ರಕೂಟರ ನಂತರ ಈ ಪ್ರದೇಶದ ಮೇಲೆ ಕಲ್ಯಾಣದ ಚಾಲುಕ್ಯರು ಅಧಿಪತ್ಯವನ್ನು ಸ್ಥಾಪಿಸಿದವರು. ಕಲ್ಯಾಣದ ಚಾಲುಕ್ಯರ ಒಂದನೇ ಸೋಮೇಶ್ವರನನ್ನು ಕುರಿತು ವಿವರಿಸುವ ಕ್ರಿ.ಶ. ೧೦೩೨ರ ಕೊಣ್ಣೂರು ಶಾಸನದಲ್ಲಿ ಈ ಭಾಗದ ಹಳ್ಳಿಗಳಾದ ಕೊಟಬಾಗಿ, ಗೋಡಗೇರಿ ಗ್ರಾಮಗಳ ಉಲ್ಲೇಖವಿರುತ್ತದೆ.[೧೬] ಇದೇ ದೊರೆಯ ಇನ್ನೊಂದು ಶಾಸನ ಕ್ರಿ.ಶ. ೧೦೫೧ರ ಕಾಲದ್ದು ಬೆಳವಿಯಲ್ಲಿ ದೊರಕಿದೆ. ಅದು ಪ್ರಧಾನರಾದ ಕಾಳಮರಸರ ಉಲ್ಲೇಖ ನೀಡುತ್ತದೆ.[೧೭]

ಕಲ್ಯಾಣದ ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಅಧೀನ ಸಾಮಂತರ ಹಾಗೂ ಅಧಿಕಾರಿಗಳಿಗೆ ಸಂಬಂಧಿಸಿದ ಶಾಸನಗಳೂ ಈ ಭಾಗದಲ್ಲಿ ದೊರೆತಿವೆ.

### ಸವದತ್ತಿ ರಟ್ಟರು

ರಾಷ್ಟ್ರಕೂಟರ ಕಾಲದಿಂದಲೂ ಅವರ ಸಾಮಂತರಾಗಿದ್ದ ಸವದತ್ತಿ ರಟ್ಟರು ಕುಹೂಂಡಿ –೩೦೦೦ ಪ್ರದೇಶದಲ್ಲಿ ಆಳ್ವಿಕೆಯನ್ನು ಮಾಡುತ್ತಿದ್ದರು. ಮುಂದೆ ಇವರು ಕಲ್ಯಾಣದ ಚಾಲುಕ್ಯರು ಮತ್ತು ಕಲಚೂರಿಗಳ ಸಾಮಂತರಾಗಿ ಮುಂದುವರೆದರು.

ಹುಕ್ಕೇರಿ ಪ್ರದೇಶವನ್ನು ಆಳಿದ ಸಾಮಂತ ಮನೆತನಗಳಲ್ಲಿ ಸವದತ್ತಿ ರಟ್ಟರು ಪ್ರಮುಖರು. ರಟ್ಟರು ಮೊದಲು ರಾಷ್ಟ್ರಕೂಟರ ಸಾಮಂತರಾಗಿದ್ದರು. ನಂತರ ಕಲ್ಯಾಣದ ಚಾಲುಕ್ಯರು ಮತ್ತು ಕಲಚೂರಿಗಳ ಸಾಮಂತರಾಗಿ ಆಡಳಿತ ನಡೆಸಿರುವರು. ಪಾರಂಪರಿಕ 'ಲಟ್ಟಲೂರು ಪುರವರಾಧೀಶ್ವರ' ವೆಂಬ ರಾಷ್ಟ್ರಕೂಟರ ಬಿರುದನ್ನು ಇವರು ಹೊಂದಿದ್ದರು. ಬೆಳಗಾವಿ, ಸವದತ್ತಿ, ಗೋಕಾಕ, ಹುಕ್ಕೇರಿ, ಚಿಕ್ಕೋಡಿ, ರಾಯಭಾಗ, ಸಂಪಗಾಂವ ಮತ್ತು ಬಾಗಲಕೋಟ ಜಿಲ್ಲೆಯ ಮುಧೋಳ ತಾಲೂಕಿನ ಪಶ್ಚಿಮ ಭಾಗ ಮತ್ತು ಜಮಖಂಡಿ ತಾಲೂಕುಗಳು ಕುಹೂಂಡಿ–೩೦೦೦ ಪ್ರದೇಶದ ಭಾಗಗಳಾಗಿದ್ದವು.

ರಟ್ಟರ ಪ್ರಮುಖ ದೊರೆಗಳೆಂದರೆ,

ಕಾರ್ತವೀರ್ಯ–I (ಕ್ರಿ.ಶ. ೯೮೦),

ಅಂಕರಸ (ಕ್ರಿ.ಶ. ೧೦೮೪–೧೦೫೧),

ಕಾರ್ತವೀರ್ಯ–II (ಕ್ರಿ.ಶ. ೧೦೬೮–೧೧೯೭),

ಕಾರ್ತವೀರ್ಯ–III (ಕ್ರಿ.೧೧೨೩–೧೧೭೧,

ಲಕ್ಷ್ಮೀದೇವ– I (ಕ್ರಿ.ಶ.೧೮೦೯),

ಕಾರ್ತವೀರ್ಯ IV (ಕ್ರಿ.ಶ.೧೧೯೯–೧೨೨೨)

ಮುಂತಾದವರು ಇವರ ಶಾಸನಗಳು ಈ ಭಾಗದಲ್ಲಿ ದೊರಕಿರುತ್ತವೆ.

ಮೊದಲನೇ ಕಾರ್ತವೀರ್ಯರಸರ (ಕಕ್ರಿ.ಶ.೯೮೦) ಆಳ್ವಿಕೆಯ ಕಾಲದಲ್ಲಿ ಈ ಪ್ರದೇಶವು ರಟ್ಟರ ಆಳ್ವಿಕೆಗೆ ಒಳಪಟ್ಟಿತ್ತು. ಇವರ ಕಾಲದಲ್ಲಿಯೇ ಸಂಕೇಶ್ವರ ಪಟ್ಟಣದಲ್ಲಿ ಬಸದಿ, ಶಂಕರಲಿಂಗ ಮತ್ತು ನಾರಾಯಣ ದೇವಾಲಯಗಳು ನಿರ್ಮಾಣವಾದವು. ಅಮ್ಮಣಗಿಯಲ್ಲಿ ವೇಸರ ಮಾದರಿಯ ಶಿಖರ ಶೈಲಿಯುಳ್ಳ ಪಾರ್ಶ್ವನಾಥ ಬಸದಿಯೂ ಈ ಕಾಲಘಟ್ಟದಲ್ಲಿಯೇ ನಿರ್ಮಾಣವಾಗಿರಬೇಕು.[೧೭] ರಟ್ಟರ ದೊರೆಯಾದ ಅಂಕರಸನು (ಕ್ರಿ.ಶ. ೧೦೮೮–೧೦೫೧) ಹೊರಡಿಸಿದ ಕ್ರಿ.ಶ. ೧೦೫೧ರ ಬೆಳವಿ ಶಾಸನದಲ್ಲಿ ಅಗ್ರಹಾರದಲ್ಲಿಯ ಒಂದು ಛತ್ರವನ್ನು ನಡೆಸುವದಕ್ಕಾಗಿ ಕೆಲವು ದತ್ತಿಗಳನ್ನು ನೀಡಿದನೆಂದು ತಿಳಿಸಲಾಗುತ್ತದೆ.[೧೮] ನಾಲ್ಕನೇ ಕಾರ್ತವೀರ್ಯನ ಕಾಲದಲ್ಲಿ (ಕ್ರಿ.ಶ. ೧೧೯೯–೧೨೨೨) ರಟ್ಟರು ತಮ್ಮ ರಾಜಧಾನಿಯನ್ನು ವರ್ಗಾಯಿಸಿಕೊಂಡರು. ಇವನು ತನ್ನ ತಮ್ಮ ಮಲ್ಲಿಕಾರ್ಜುನನೊಡಗೂಡಿ ಈ ಭಾಗವನ್ನು ಆಳಿದುದಾಗಿ ತಿಳಿಯುತ್ತದೆ. ಇವರ ಕಾಲದ ಕ್ರಿ.ಶ. ೧೧೯೯–೧೨೨೨ ಶಾಸನಗಳು ಸಂಕೇಶ್ವರದಲ್ಲಿ ದೊರಕಿವೆ.[೧೯] ಮತ್ತು

ಕ್ರಿ.ಶ. ೧೧೨೫ ಭೈರಾಪುರ ಶಾಸನವು. ಲಲಿತದೇವಿ ಎಂಬ ರಟ್ಟರ ರಾಣಿಯು ತನ್ನ ಆಡಳಿತಕೊಳಳಪಟ್ಟಿದ್ದ ಮತ್ತೆವಾಡ ಭೂಮಿ ಮನೆ ಮತ್ತು ಹೊಲ ಬಣವಿಯನ್ನು ದತ್ತಿಯನ್ನಾಗಿ ನೀಡಿದ ವಿಷಯವನ್ನು ತಿಳಿಸುತ್ತದೆ.

**ದೇವಗಿರಿ ಯಾದವರು (ಸೇವುಣರು)**

ಕಲ್ಯಾಣದ ಚಾಲುಕ್ಯರ ನಾಲ್ಕನೆಯ ಸೋಮೇಶ್ವರನ ಕಾಲದಲ್ಲಿ (ಕ್ರಿ.ಶ. ೧೧೮೪) ದೇವಗಿರಿಯ ಯಾದವರ ದಾಳಿಗಳು ಈ ಭಾಗದಲ್ಲಿ ಪ್ರಾರಂಭವಾಗಿ ಈ ಪ್ರದೇಶಗಳು ಅವರ ಆಡಳಿತಕ್ಕೆ ಒಳಪಟ್ಟವು. ಯಾದವ ವಂಶದ ನಾಲ್ಕು ಜನ ದೊರೆಗಳು ಮಾತ್ರ ಬೆಳಗಾವಿ ಜಿಲ್ಲೆಯ ಕೆಲವು ಪ್ರದೇಶಗಳನ್ನು ಆಳಿದರು. ಅವರುಗಳೆಂದರೆ

ಸಿಂಘಣ–I (ಕ್ರಿ.ಶ. ೧೮೦೦–೧೨೪೭)

ಕೃಷ್ಣ ಅಥವಾ ಕನ್ನರ (ಕ್ರಿ.ಶ. ೧೨೪೭–೬೧)

ಮಹಾದೇವ (ಕ್ರಿ.ಶ. ೧೨೬೧–೭೧)

ರಾಮಚಂದ್ರ (ಕ್ರಿ.ಶ. ೧೨೭೦–೧೩೧೨)

ಒಂದನೇ ಸಿಂಘಣನ ಉತ್ತರಾಧಿಕಾರಿಯಾಗಿದ್ದ ಕನ್ನರ (ಕ್ರಿ.೧೨೪೭–೬೧)ನ ಶಾಸನವು ಶಕ ೧೧೯೯ ರ ಕಾಲ್ಕಕೆ ಸಂಬಂಧಿಸಿದ್ದು ಬೆಳವಿಯಲ್ಲಿ ದೊರೆತಿದೆ. ಇದು ದಳವಾಯಿ ಭೋಗದೇವ ಯಾದವ ಎನ್ನುವವನು ಗ್ರಾಮದೇವತೆಗೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೨೧] ಇದೇ ಅರಸನ ಕ್ರಿ.ಶ. ೧೨೬೦ರ ಶಾಸನವು ಅರ್ಜುನವಾಡದಲ್ಲಿ ದೊರಕಿರುತ್ತದೆ. (ಸದ್ಯ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆ, ಧಾರವಾಡದಲ್ಲಿರುತ್ತದೆ) ಐತಿಹಾಸಿಕವಾಗಿ ಈ ಶಾಸನವು ಮಹತ್ವವನ್ನು ಪಡೆದಿರುತ್ತದೆ. ಈ ಶಾಸನದಲ್ಲಿ ಬಸವೇಶ್ವರರ ಅಣ್ಣನಾದ ದೇವರಾಜನ ಮೊಮ್ಮಗ ಹಾಲಬಸವದೇವ ಎಂಬುವನಿಗೆ ಯಾದವ ಕನ್ನರಸನ ಮಂತ್ರಿಯಾದ ಚೌಡಿಶೆಟ್ಟಿಯು ದಾನ ನೀಡಿದ ವಿಷಯವನ್ನು ತಿಳಿಸಿದ್ದಾನೆ.[೨೨] ಈ ಶಾಸನದಲ್ಲಿ ಬಸವೇಶ್ವರರ ಪ್ರಸ್ತಾಪ ಬರುವುದರಿಂದ ಇತಿಹಾಸಕಾರರು ಅರ್ಜುನವಾಡ ಶಿಲಾಶಾಸನಕ್ಕೆ ಮಹತ್ವವನ್ನು ನೀಡಿರುತ್ತಾರೆ. ಹಾಲಶಂಕರ ದೇವಾಲಯದ ಬದಿಯಲ್ಲಿ ಮಣ್ಣಿಗಾಗಿ ನೆಲವನ್ನು ಅಗೆಯುವಾಗ ಒಂದು ಶಾಸನ ದೊರಕಿದೆ. ಈ ಶಾಸನ ಸುಮಾರು ೧೩ನೇ ಶತಮಾನಕ್ಕೆ ಸಂಬಂಧಿಸಿದ ಸೀಮೆಯ ಕಲ್ಲು. ಇದು ಈಗ ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ಸಂಶೋಧನಾ ಸಂಸ್ಥೆಯಲ್ಲಿದೆ. ಬಸವಣ್ಣನವರ ವಂಶಜರ ಗ್ರಾಮದಲ್ಲಿಯೇ ಸಿಕ್ಕ ಅಪೂರ್ವತೆಯಿಂದ ಕೂಡಿದ ಇದು ಅವರನ್ನು 'ದಣ್ಣಾಯಕ' ಎಂದು ಕರೆದ ಪ್ರಥಮ ಶಾಸನವಾಗಿರುತ್ತದೆ.[೨೩] ಯಾದವರಿಗೆ ಸಂಬಂಧಿಸಿದ ಕ್ರಿ.ಶ. ೧೨೬೫ರ ಶಾಸನವೊಂದು ಯಾದಗೂಡದಲ್ಲಿ ದೊರಕಿದ್ದು ಅದು ಹಾಳಾದ ಸ್ಥಿತಿಯಲ್ಲಿರುತ್ತದೆ.

**ದೆಹಲಿ ಸುಲ್ತಾನರು**

ಹದಿನಾಲ್ಕನೇ ಶತಮಾನದ ಪ್ರಾರಂಭದಲ್ಲಿ ದಕ್ಷಿಣ ಭಾರತದ ಮೇಲೆ ಮುಸ್ಲಿಂ ದಾಳಿಗಳು ಆರಂಭವಾದವು. ಕ್ರಿ.ಶ. ೧೨೧೦ರಲ್ಲಿ ಅಲ್ಲಾ_ಐದ್–ದಿನ್ ಖಿಲ್ಜಿಯು ಮಲ್ಲಿಕ್ ಕಾಫರನ ನೇತೃತ್ವದಲ್ಲಿ ಸೇನೆಯನ್ನು ದಂಡಯಾತ್ರೆಗೆ ಕಳಿಸಿದನು. ಇವನು ಕ್ರಿ.ಶ. ೧೨೧೧ರಲ್ಲಿ

ದೊರಸಮುದ್ರ ಮತ್ತು ೧೩೧೩ರಲ್ಲಿ ದೇವಗಿರಿಯ ಮೇಲೆ ದಾಳಿಮಾಡಿ ಆಹಾರ ಸಂಪತ್ತನ್ನು ಕೊಳ್ಳೆ ಹೊಡೆದನು. ಯಾದವರ ಎಲ್ಲ ಪ್ರದೇಶಗಳು ದೆಹಲಿ ಸುಲ್ತಾನನ ಆಡಳಿತಕ್ಕೆ ಒಳಪಟ್ಟವು.[೨೪] ಮಹಮ್ಮದ ಬಿನ್-ತುಘಲಕ್‌ನ ಕಾಲದಲ್ಲಿ (ಕ್ರಿ.ಶ. ೧೩೨೫-೫೧) ಈ ಪ್ರದೇಶವನ್ನು ಅವನ ಪ್ರತಿನಿಧಿಯಾಗಿ ಪ್ರಭು ಬಸವಂತರಾಯನು ಆಳುತ್ತಿದ್ದನು. (ವಂಟಮೂರಿ ದೇಸಾಯಿಯವರ ಮೂಲ ಪುರುಷ) ಆದರೆ ಕೆಲವೇ ದಿನಗಳಲ್ಲಿ ಮಹಮ್ಮದ ತುಘಲಕ್‌ನು ತನ್ನ ಅಧಿಕಾರಿ ಆಮೀರನನ್ನು ನೇಮಿಸಿದನು. ಕ್ರಿ.ಶ. ೧೩೪೭ರಲ್ಲಿ ಹೊರಡಿಸಿದ ಚಕ್ರವರ್ತಿಯ ಆಜ್ಞೆಯಲ್ಲಿ ಹುಕ್ಕೇರಿಯ ಅಮೀರನ ಹೆಸರು ಉಲ್ಲೇಖಿತವಾಗಿದೆ.[೨೫] ಬೆಳಗಾವಿ ಪ್ರದೇಶವಾರು ಆಡಳಿತವನ್ನು ನೋಡಿಕೊಳ್ಳವುದಕ್ಕಾಗಿ ಚಕ್ರವರ್ತಿಯ ಇಬ್ಬರು ಅಧಿಕಾರಿಗಳನ್ನು ನೇಮಿಸಿದನು. ಅವರಲ್ಲಿ ಒಬ್ಬನು ರಾಯಭಾಗದಲ್ಲಿದ್ದನು. ಇನ್ನೊಬ್ಬನು ಹುಕ್ಕೇರಿಯಲ್ಲಿದ್ದನೆಂದು 'ಫರಿಸ್ತಾ' ಅಭಿಪ್ರಾಯ ಪಟ್ಟಿದ್ದಾನೆ.

ಬಹುಶಃ ಆ ಅಧಿಕಾರಿ ಗಜಬರಖಾನ ಆಗಿರಬೇಕು. ಇವನು ಈ ಪ್ರದೇಶದಲ್ಲಿ ಶಾಂತಿ ಸುವ್ಯವಸ್ಥೆಯನ್ನು ಕಾಪಾಡಿಕೊಂಡು ಬಂದನು. 'ಟಿಕರಿ ಖಾನಾಪುರ' ರಣರಂಗದಲ್ಲಿ ಗಜಬರಖಾನನ ಮರಣವಾಯಿತು. ಇಂದಿಗೂ ಅವನ ಸಮಾಧಿಯನ್ನು ಗಜಬರವಾಡಿಯಲ್ಲಿ ಕಾಣಬಹುದು. ಈ ಸಮಾಧಿಯ ಗುಮ್ಮಟದ ಕಟ್ಟಡವನ್ನು ನದಿಯ ಕೇತಗೌಡ ದೇಸಾಯಿಯು ಕಟ್ಟಿಸಿದನು.[೨೫]

**ಬಹುಮನಿ ಸುಲ್ತಾನರು**

ಬಹುಮನಿ ಸುಲ್ತಾನರ ಕಾಲದಲ್ಲಿ ಸುಲ್ತಾನ್ ಶಿಯಾಬುದ್ದೀನ್ ಮಹಮ್ಮದನು ಕಾಲದಲ್ಲಿ (೧೪೭೨-೧೫೧೮) ಕೊಂಕಣದಲ್ಲಿ ಪ್ರಾಂತಾಧಿಕಾರಿಯಾಗಿದ್ದು ಬಹದ್ದೂರ್ ಗಿಲಾನಿಯು ಸುಲ್ತಾನನ ವಿರುದ್ಧ ದಂಗೆಯೆದ್ದು ಗೋವಾ ಮತ್ತು ಬೆಳಗಾವಿಯನ್ನು ಕ್ರಿ.ಶ. ೧೪೮೯ರಲ್ಲಿ ವಶಪಡಿಸಿಕೊಂಡು ಸಂಕೇಶ್ವರವನ್ನು ತನ್ನ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡಿದ್ದನು. ಇವನು ಹರಗಾಪೂರಗಡದಲ್ಲಿ ಕೋಟೆಯನ್ನು ಕಟ್ಟಲಾರಂಭಿಸಿದ. ಕೋಟೆಯ ರಚನೆ ಮುಗಿಯುವುದರ ಒಳಗೆ ಬಹುಮನಿ ಅರಸನಾದ ಸುಲ್ತಾನ ಮಹಮ್ಮದನು ಕ್ರಿ.ಶ. ೧೪೯೩ರಲ್ಲಿ ಮತ್ತಿಗೆ ಹಾಕಿ ಬಹದ್ದೂರ ಗಿಲಾನಿಯನ್ನು ಸೋಲಿಸಿ ಸಂಕೇಶ್ವರ ಹಾಗೂ ಅಲ್ಲಿಯ ಕೋಟೆಯನ್ನು ವಶಪಡಿಸಿಕೊಂಡನು.[೨೬] ೧೪೯೪ರಲ್ಲಿ ಬಹದ್ದೂರ್ ಗಿಲಾನಿಯ ಮರಣಹೊಂದಿದ್ದರಿಂದ ಐನ್-ಉಲ್-ಮುಲ್ಕ್‌ನನ್ನು ಈ ಪ್ರದೇಶದ ಆಡಳಿತಗಾರನನ್ನಾಗಿ ನೇಮಕ ಮಾಡಲಾಯಿತು. ಮುಂದೆ ಬಿಜಾಪೂರದ ಯೂಸುಫ್ ಆದಿಲ್ ಖಾನನು ತನ್ನ ಸ್ವತಂತ್ರತೆಯನ್ನು ಘೋಷಿಸಿಕೊಂಡು ನಂತರದಲ್ಲಿ ಐನ್-ಉಲ್-ಮುಲ್ಕನು ತನ್ನ ನಿಷ್ಠೆಯನ್ನು ಬಿಜಾಪುರಕ್ಕೆ ವರ್ಗಾಹಿಸಿದನು. ಇವನ ಕಾಲದಲ್ಲಿ ಹುಕ್ಕೇರಿ ಪ್ರದೇಶವು ಅಭಿವೃದ್ಧಿಯ ಪಥದಲ್ಲಿತ್ತು. ಇವನು ಹುಕ್ಕೇರಿಯಲ್ಲಿ ಕೋಟೆ ಮತ್ತು ದೊಡ್ಡಗುಮ್ಮಟವನ್ನು ಕಟ್ಟಿಸಿದನು ಹಾಗೂ ಕೆರೆ ಬಾವಿ ಕಾರಂಜಿಗಳನ್ನು ಕಟ್ಟಿಸಿದನು. ಇವನು ಹೂ-ಬನಗಳನ್ನು ನಿರ್ಮಿಸಿದನು. ಇಲ್ಲಿಯ ಉತ್ತಮ ದರ್ಜೆಯ ಹೂಗಳು ಬಿಜಾಪುರಕ್ಕೆ ರಫ್ತಾಗುತ್ತಿದ್ದು, ಹೂವಿನಕೇರಿಯೆಂಬ ಹೆಸರು ಇದ್ದದ್ದು ಹುಕ್ಕೇರಿ ಅಂತ ಆಗಿರಬಹುದೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಐನ್-ಉಲ್-ಮುಲ್ಕಾ ಗಿಲಾನಿಯ ನಂತರದಲ್ಲಿ ಅವನ ಸಹೋದರನಾದ ಫತೇಹ ಉಲ್ ಮುಲ್ಕ (ಕ್ರಿ.ಶ. ೧೫೪೭-೧೫೬೮) ನ ಹುಕ್ಕೇರಿಯ ಆಡಳಿತಗಾರನಾಗಿದ್ದನು. ಕ್ರಿ.ಶ. ೧೫೧೮ರಲ್ಲಿ ಬಿಜಾಪುರದ ಯೂಸೂಫ್ ಆದಿಲ್ ಷಾನ ಆಡಳಿತಕ್ಕೆ ಒಳಪಟ್ಟಿತ್ತು. ಫತೇಹ ಉಲ್ ಮುಲ್ಕನು ದೊಡ್ಡ ಗುಮ್ಮಟದ ಪಕ್ಕದಲ್ಲಿರುವ ಚಿಕ್ಕ

ಗುಮ್ಮಟವನ್ನು ನಿರ್ಮಿಸಿದನು. ಇವನ ತರುವಾಯ ಬಿಜಾಪುರದ ಸುಲ್ತಾನ ಒಂದನೇ ಇಬ್ರಾಹಿಮನ ಮರಣದ (೧೫೦೮) ನಂತರ ಅಧಿಕಾರಕ್ಕೆ ಬಂದ ಒಂದನೇ ಅಲಿಯ ಕಾಲದಲ್ಲಿ ರಣದುಲ್ಲಾಖಾನ ಎಂಬುವನಿಗೆ ಹುಕ್ಕೇರಿಯು ಕ್ರಿ.ಶ. ೧೫೬೯ರಲ್ಲಿ ಜಹಾಗೀರಾಗಿ ನೀಡಲ್ಪಟ್ಟಿತು. ರಣದುಲ್ಲಾಖಾನನ ತರುವಾಯ ಅವನ ಮಗ ರುಸ್ತುಂಜಮನು ಹುಕ್ಕೇರಿಯ ಆಡಳಿಗಾರನಾಗಿದ್ದನು. ಕ್ರಿ.ಶ.೧೬೦೦-೧೬೪೧ ಇವನು ಚೀನಿಗುಮ್ಮಟ ಮತ್ತು ಬಸ್ ನಿಲ್ದಾಣ ಹತ್ತಿರವಿರುವ ಕದಮ್ ಏ ರಸೂಲ ಮಸೀದಿಯನ್ನು ನಿರ್ಮಿಸಿದನು.[೨೮] ರುಸ್ತುಂ ಜಮಾನ್ನುನು ಕ್ರಿ.ಶ. ೧೬೧೧ರಲ್ಲಿ ಮಿರಜ್ ಪ್ರಾಂತ್ಯದ ಆಡಳಿತಗಾರನಾಗಿ ನೇಮಕಗೊಂಡಾಗ ಹುಕ್ಕೇರಿ ಮತ್ತು ಕೊಲ್ಲಾಪುರದ ಬಹುಭಾಗಗಳು ಅಬ್ದುಲ್ ಕರೀಮ ಎಂಬವನ ಆಡಳಿತಕ್ಕೆ ಒಳಪಟ್ಟಿದ್ದವು ಮುಂದೆ ಘನ್ನಾಳದ ಮರಾಠ ಅರಸರು ಕ್ರಿ.ಸ. ೧೬೪೩ರಲ್ಲಿ ಈ ಭಾಗವನ್ನು ತಮ್ಮ ಪ್ರಭುತ್ವಗೊಳಪಡಿಸಿದರು.

**ಮರಾಠರು**

ಮಹಮದೀಯರ ಆಡಳಿತ ಕೊನೆಗೊಂಡು ಈ ಪ್ರದೇಶವು ಮರಾಠರ ಆಡಳಿತಕ್ಕೆ ಒಳಪಟ್ಟಿತು. ಕ್ರಿ.ಶ. ೧೬೬೮ ರಿಂದ ೧೬೮೬ರ ವರೆಗೆ ಹುಕ್ಕೇರಿಯು ಮುಧೋಳದ ಘೋರ್ಪಡೆಯವರ ಆಡಳಿತಕ್ಕೆ ಒಳಪಟ್ಟು, ನಂತರ ಈ ಪ್ರದೇಶವು ಶಿವಾಜಿಯ ವಶವಾಯಿತು.[೨೯] (ಕ್ರಿ.ಶ. ೧೬೬೪-೮೦) ಶಿವಾಜಿ ಮಹಾರಾಜರ ಕಾಲದಲ್ಲಿ ಅತೀ ವಿಜೃಂಭಣೆಯಿಂದ ಮೆರೆದ ಕೋಟೆ (ಕಿಲ್ಲೆ) ಯನ್ನು ಇಂದಿಗೂ ಕಾಣಬಹುದು.

ಕ್ರಿ.ಶ. ೧೬೮೭ರಲ್ಲಿ ಬಿಜಾಪುರವು ಮೊಗಲರಿಂದ ಸಂಪೂರ್ಣವಾಗಿ ಪತನವಾದ ನಂತರ ಹುಕ್ಕೇರಿ ಭಾಗವೊಂದೇ ಸ್ವತಂತ್ರವಾಗಿ ಸ್ಥಳವಾಗಿತ್ತು. ಈ ಪ್ರದೇಶವು ವಂಟಮೂರಿ ದೇಸಾಯಿಯವರ ಪೂರ್ವಜರಿಂದ ಆಳಲ್ಪಡುತ್ತಿತ್ತು. ಕ್ರಿ.ಶ. ೧೭೬೩ರಲ್ಲಿ ಮಾಧವರಾವ್ ಪೇಶ್ವೆಯು ಈ ಭಾಗವನ್ನು ಕೊಲ್ಲಾಪುರ ಸರ್ದಾರರ ಆಡಳಿತಕ್ಕೆ ಒಳಪಡಿಸಿದನು. ಮುಂದೆ ಅವರ ಕಿರುಕುಳಕ್ಕಾಗಿ ಈ ಪ್ರದೇಶವನ್ನು ಬೇರ್ಪಡಿಸಿ ಈ ಭಾಗಕ್ಕೆ ಸ್ವತಂತ್ರವಾದ ಅಧಿಕಾರಿಯನ್ನೇ ನೇಮಿಸಿದನು. ಪೇಶ್ವೆಯ ಪತನಾನಂತರದಲ್ಲಿ ಅವರ ಉಳಿದ ಭಾಗಗಳ ಜೊತೆಗೆ ಹುಕ್ಕೇರಿಯು ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿತು. ಕ್ರಿ.ಶ. ೧೮೦೪ರಲ್ಲಿ ಜನರಲ್ ವೆಲ್ಲೆಸ್ಲಿಗೆ ಸಲ್ಲಿಸಿದ ಸೇವೆಗೆ ಪ್ರತಿಯಾಗಿ ಹುಕ್ಕೇರಿ, ಚಿಕ್ಕೋಡಿ ಮತ್ತು ನಿಪ್ಪಾಣಿ ಪಂಟಮೂರಿ ದೇಸಾಯಿಯವರಿಗೆ ನೀಡಲ್ಪಟ್ಟವು. ನಂತರದಲ್ಲಿ ಹುಕ್ಕೇರಿಯು ಬ್ರಿಟಿಷರ ಆಡಳಿತಕ್ಕೆ ಒಳಪಟ್ಟು 'ಮಹಲ್' ಆಗಿತ್ತು. ಮುಂದೆ ೧೯೦೭ರಲ್ಲಿ ಹುಕ್ಕೇರಿಯನ್ನು ತಾಲೂಕನ್ನಾಗಿ ಮಾಡಲಾಯಿತು.[೩೦]

**ಶಾಸನಗಳು**

ಇತಿಹಾಸ ರಚನೆಯಲ್ಲಿ ಶಾಸನಗಳು ಒದಗಿಸುವ ಮಾಹಿತಿಯು ಪ್ರಮಾಣೀಭೂತವಾದುದೆಂದು ಭಾವಿಸಲಾಗಿದೆ. ಶಾಸನಗಳ ಅಭ್ಯಾಸದ ವ್ಯಾಪ್ತಿಯು ವಿಶಾಲವಾದುದು, ಅಷ್ಟೇ ಆಳವಾದದೂ ಹೌದು. ಹೆಚ್ಚು ಹೆಚ್ಚು ಒಳಹೊಕ್ಕು ನೋಡಿದಂತೆ ನಮ್ಮ ಸಂಸ್ಕೃತಿಯ ವಿವಿಧ ಮುಖಗಳ ಅಭ್ಯಾಸವನ್ನು ಶ್ರೀಮಂತಗೊಳಿಸುವ ಅಣಿಮುತ್ತುಗಳು ಹೊರಬರುತ್ತಲೇ ಇರುತ್ತವೆ. ಬರಿ ರಾಜಕೀಯ ಇತಿಹಾಸವಷ್ಟೇ ಅಲ್ಲದೆ ಕಲೆ, ಸಾಹಿತ್ಯ, ಧರ್ಮ, ಭಾಷೆ, ಅರ್ಥವ್ಯವಸ್ಥೆ, ವಾಸ್ತು ಮತ್ತು ಶಿಲ್ಪಕಲೆ ಮುಂತಾದ ಸಾಂಸ್ಕೃತಿಕ ಅಂಶಗಳ ಕುರಿತು ಭೌಗೋಳಿಕ ಮತ್ತು ಕಾಲಮಾನ ಚೌಕಟ್ಟಿನಲ್ಲಿ ಇತಿಹಾಸವನ್ನು ರಚಿಸುವ ನಿಟ್ಟಿನಲ್ಲಿ ಶಾಸನಗಳ ಪಾತ್ರ ಹಿರಿದಾದುದು.[೩೧] ಕಲ್ಲು,

ಲೋಹ, ಕಟ್ಟಿಗೆ, ಇಟ್ಟಿಗೆ, ಶಂಖ ಹಾಗೂ ಮರದ ತೊಗಟೆಯ ಮೇಲೆ ಶಾಸನಗಳನ್ನು ಕೆತ್ತಲಾಗಿದೆ. ಅವು ಐತಿಹಾಸಿಕವಾಗಿ ಅಷ್ಟೇ ಅಲ್ಲದೆ ಸಾಂಸ್ಕೃತಿಕವಾಗಿಯೂ ಮಹತ್ವ ಪಡೆದುಕೊಂಡಿವೆ. ಆಯಾ ಕಾಲದ ಅರಸರುಗಳ ಅಧಿಕಾರಿಗಳು ಸಾಮಾನ್ಯ ಆಡಳಿತಗಾರರಿಗೆ ಸಂಬಂಧಿಸಿದ ಆಡಳಿತ ವಿಧಾನಗಳ, ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಭಾಷೆ, ಸಾಹಿತ್ಯ, ವಾಸ್ತು ಶಿಲ್ಪಕಲೆ ಹಾಗೂ ಇತರ ವಿವರಗಳನ್ನು ಶಾಸನಗಳು ಒಳಗೊಂಡಿರುತ್ತವೆ. ವಿಫುಲ ಮಾಹಿತಿಯನ್ನು ಒದಗಿಸಿಕೊಡುತ್ತವೆ.

ಹುಕ್ಕೇರಿ ತಾಲೂಕು ಪರಿಸರಕ್ಕೆ ಸಂಬಂಧಿಸಿದ ಒಟ್ಟು ಮೂವತ್ತೆರಡು ಶಾಸನಗಳು ಪ್ರಕಟವಾಗಿವೆ. ಅವುಗಳಲ್ಲಿ ಹದಿನಾರು ಶಾಸನಗಳು ಕನ್ನಡ ಶಾಸನಗಳಾಗಿವೆ. ಉಳಿದವು ಪರ್ಶಿಯನ್ ಮತ್ತು ಉರ್ದು ಶಾಸನಗಳಾಗಿವೆ. ಇವು ಬೆಳಗಾವಿ ಜಿಲ್ಲಾ ಗೆಜೆಟಿಯರ್ ಮತ್ತು ಕರ್ನಾಟಕ ರಾಜ್ಯ ಗೆಜಿಟಿಯರ್‌ನಲ್ಲಿ ಪ್ರಕಟಿತವಾಗಿವೆ. ಅಲ್ಲದೆ ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್‌ದಲ್ಲಿಯ ಹಾಗೂ ಇತರೆ ಪುಸ್ತಕಗಳಲ್ಲಿಯೂ ಕೆಲವು ಪ್ರಕಟಿತವಾಗಿವೆ. ಸಂಬಂಧಿಸಿದ ಶಾಸನಗಳನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ.

### ೧. ಅರ್ಜುನವಾಡ ಶಾಸನ (ಕ್ರಿ.ಶ. ೧೨೬೦)

ಈ ಶಾಸನವನ್ನು ಡಾ.ಆರ್.ಸಿ.ಹಿರೇಮಠ ಹಾಗೂ ಎಂ.ಎಂ. ಕಲಬುರ್ಗಿ ಅವರು ಸಂಪಾದಿಸಿರುವರು. ಅರ್ಜುನವಾಡ ಶಾಸನವು ಈ ಪ್ರದೇಶದ ಸಾಂಸ್ಕೃತಿಕ ಅಧ್ಯಯನ ರೂಪಿಸುವಲ್ಲಿ ಬಹಳ ಮಹತ್ವದ ಪಾತ್ರ ವಹಿಸುತ್ತದೆ. ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯಲ್ಲಿ ಹುಕ್ಕೇರಿ ತಾಲೂಕಿಗೆ ಮಹತ್ವದ ಸ್ಥಾನವಿದೆ.[೨] ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದ ಧಾರ್ಮಿಕ ಮತ್ತು ಸಾಮಾಜಿಕ ವೈಚಾರಿಕ ಕ್ರಾಂತಿಗೆ ಕಾರಣರಾದ ಶ್ರೀ ಜಗಜ್ಯೋತಿ ಬಸವೇಶ್ವರ ವಂಶಜರು ಬಾಳಿ ಬದುಕಿದ ನಾಡಿದು ಎಂಬುದಕ್ಕೆ ಅರ್ಜುನವಾಡ ಶಾಸನ ಆಧಾರವಾಗಿದೆ. ಇದು ಬೆಳಗಾಂವಿ ಜಿಲ್ಲೆ ಹುಕ್ಕೇರಿ ತಾಲೂಕಿನ ಅರ್ಜುನವಾಡ ಸಮೀಪದಲ್ಲಿರುವ ಹಾಲ ಶಂಕರಲಿಂಗ ದೇವಸ್ಥಾನದಲ್ಲಿ ದೊರೆತಿದೆ. "ಮಹಾವ್ಯಕ್ತಿಗಳು ಅಪರೂಪ, ಮಹಾಕವಿಗಳು ಅದಕ್ಕಿಂತಲೂ ಹೆಚ್ಚು ಅಪರೂಪ. ಮಹಾಕವಿ ಮಹಾವ್ಯಕ್ತಿಯೂ ಆಗಿರುವುದು. ಅತ್ಯಂತ ಅಪರೂಪದ ಘಟನೆ" ಎಂಬ ಅರ್ಥದ ಹೇಳಿಕೆಯೊಂದುಂಟು. ಬಸವಣ್ಣನವರಲ್ಲಿ ಅಂತಹ ಮಹೋನ್ನತ ವ್ಯಕ್ತಿತ್ವ ಮಹಾಕವಿ ಹೃದಯದ ಹಾರ್ದಿಕ ಸಂಬಂಧವನ್ನು ಕಾಣುತ್ತೇವೆ. ಇಡೀ ವಚನ ಸಾಹಿತ್ಯದಲ್ಲಿ ಬಸವಣ್ಣನವರ ಸ್ಥಾನ ದೃಷ್ಟಿಯಿಂದ ಅದ್ವಿತೀಯವಾದುದು.

ಬಸವಣ್ಣನವರ ವಚನಗಳು ಕೂಡಲಸಂಗಮದೇವರನ್ನು ಕುರಿತು ಆತ್ಮ ನಿವೇದನೆಯನ್ನು ಮಾಡಿಕೊಂಡ ಸೂಕ್ತಿಗಳು. ಅವುಗಳಲ್ಲಿ ಅವರ ಜೀವನ ಚರಿತ್ರೆಯ ಕೆಲವು ಅಸ್ಪಷ್ಟ ಗೆರೆಗಳನ್ನು ಕಾಣುತ್ತೇವೆ. ಅವರ ಕಾಲಾನಂತರ ಬದುಕಿದ್ದ ಹರಿಹರ ಕವಿಯು(೧೨೨೦) ಬಸವಣ್ಣನವರ ಜೀವನ ಚರಿತ್ರೆಯನ್ನು ರಗಳೆಯ ರೂಪದಲ್ಲಿ ಮೊಟ್ಟ ಮೊದಲ ಬರೆದಿರುವನು. ಆ ಕಾವ್ಯದಲ್ಲಿ ಸಹ ಬಸವಣ್ಣನವರ ಜೀವನದ ಬಗ್ಗೆ ಸಂಗತಿಗಳನ್ನು ಸೂಚ್ಯವಾಗಿ ಉಲ್ಲೇಖಿಸಿರುವನು. ಹರಿಹರನ ಸಮಕಾಲೀನ ಅಥವಾ ಅನಂತರ ಜೀವಿಸಿದ್ದ ಪಾಲ್ಕುರಿಗೆ ಸೋಮನಾಥ ಕವಿ ತೆಲಗು ಭಾಷೆಯಲ್ಲಿ ದ್ವಿಪದಿ ಛಂದಸ್ಸಿನಲ್ಲಿ "ಬಸವ ಪುರಾಣಮು" ಕಾವ್ಯವನ್ನು ರಚಿಸಿರುವನು. ಇದನ್ನು ಭೀಮಕವಿಯು ೧೩೬೯ರಲ್ಲಿ "ಭಾಮಿನೀ ಷಟ್ಪದಿ"ಯಲ್ಲಿ ಅನುವಾದಿಸಿದನು. ಹೀಗೆ

ಬಸವಣ್ಣನವರ ಸಮಗ್ರ ಚರಿತ್ರೆಯನ್ನು ರೂಪಿಸುವಲ್ಲಿ ವಚನಗಳು ಕಾವ್ಯ ಪುರಾಣಗಳ ಜೊತೆಯಲ್ಲಿ ಕೆಲವು ಶಾಸನಗಳು ಸಹಕಾರಿಯಾಗಿವೆ. ಬಸವಣ್ಣನವರ ಚರಿತ್ರೆ ಮತ್ತು ವ್ಯಕ್ತಿತ್ವದ ಮೇಲೆ ಪ್ರತ್ಯೇಕವಾಗಿ ಈ ಪರೋಕ್ಷವಾಗಿ ಬೆಳಕು ಚೆಲ್ಲುವ ಸಂಶೋಧಕರಿಂದ ಮಾನ್ಯ ಮಾಡಲ್ಪಟ್ಟ ಹದಿಮೂರು ಶಾಸನಗಳು ಬೆಳಕಿಗೆ ಬಂದಿವೆ. ಬಸವಣ್ಣನವರ ಚರಿತ್ರೆಯನ್ನು 'ಬಸವರಾಜ ದೇವರ ರಗಳೆ' ಕೃತಿ ರೂಪದಲ್ಲಿ ಬರೆದ ಹರಿಹರರಿಗಿಂತಲೂ ಪೂರ್ವದಲ್ಲಿಯೇ ಬಸವಣ್ಣನವರ ವೈಯಕ್ತಿಕ ಚರಿತ್ರೆ, ಜನ್ಮಸ್ಥಳದ ಮೇಲೆ ಬೆಳಕು ಚೆಲ್ಲುವ ಹಾಗೂ ಬಸವರಾಜ ದೇವರ ರಗಳೆಯಲ್ಲಿನ ಬಸವಣ್ಣನವರ ತಂದೆ ಮತ್ತು ಊರುಗಳ ಬಗ್ಗೆ ಇದ್ದ ಸಂದೇಹಗಳನ್ನು ನಿವಾರಿಸುವಲ್ಲಿ (ಕ್ರಿ.ಶ. ೧೨೦೬೦) ಅರ್ಜುನವಾಡ ಶಾಸನ ಮೈಲುಗಲ್ಲಾಗಿದೆ. ಈ ಶಾಸನದಲ್ಲಿ ನಿರೂಪಿತವಾಗಿರುವ ಬಸವಣ್ಣನವರು ಹಾಗೂ ಅವರ ವಂಶಾವಳಿಗೆ ಸಂಬಂಧಿಸಿದ ಸಂಗತಿಗಳು ಬಸವಣ್ಣನವರ ಚರಿತೆಯನ್ನು ಹೇಳುವ ಕಾವ್ಯಗಳಿಗಿಂತ ಪ್ರಾಚೀನವೂ, ವಿಶ್ವಾಸನೀಯವೂ ಆಗಿರುವುದರಿಂದ ಪ್ರಸ್ತುತ ಶಾಸನಕ್ಕೆ ಐತಿಹಾಸಿಕ ಹಾಗೂ ಚಾರಿತ್ರಿಕ ಮಹತ್ವ ಪ್ರಾಪ್ತವಾಗಿದೆ.[೩೩]

ಅರ್ಜುನವಾಡ ಶಾಸನವನ್ನು ಮೊದಲು ಶೋಧಿಸಿದವರು ಶ್ರೀ ನಾ.ಶ್ರೀ ರಾಜಪುರೋಹಿತರವರು, ನಂತರ ಶಾಸನವನ್ನು ಓದಿ ಬೆಳಕಿಗೆ ತಂದ ಕೀರ್ತಿ ಹಲಸಂಗಿ ಚೆನ್ನಮಲ್ಲಪ್ಪ, ಪ್ರೊ.ಎಸ್.ಸಿ. ನಂದಿಮಠ ಅವರಿಗೆ ಸಲ್ಲುತ್ತದೆ. ಈ ಶಾಸನದ ಕಾಲ ಶಾಲಿವಾಹನಶಕ ೧೧೮೨ರ (ಕ್ರಿ.ಶ.೧೨೬೦) ಬಸವಣ್ಣನವರು ಕಾಲವಾದ ತರುವಾಯ ಸುಮಾರು ನೂರು ವರ್ಷ ಕಾಲಾನಂತರ ಈ ಶಾಸನ ರಚನೆಯಾಗಿದೆ. ಇದರಲ್ಲಿ ಬಸವೇಶ್ವರ ಹಾಗೂ ಅವರ ವಂಶಾವಳಿಯ ಚರಿತ್ರೆಯಿದೆ.[೩೪]

ಶಾಸನದ ಆರಂಭದಲ್ಲಿ 'ಶಿವ' ಮತ್ತು 'ಕಲ್ಲಿನಾಥ'ರ ಸ್ತುತಿ ನಂತರ ಬಸವಣ್ಣನವರ ಸ್ತುತಿ ಇದೆ. ಈ ಶಾಸನದ ಮುಖ್ಯ ಭಾಗವಾದ ಶ್ರಿ ಮತ್ತಂತದ(ರ್ದ) ತದ್ದೇವಾಡಿ ಮಧ್ಯ ಗ್ರಾಮ ಬಾಗವಾಡಿ ಪುರವರಾಧೀಸ್ವರಂ ಮಾದಿರಾಜನ ತನೋಜಂ ಬಸವರಾಜರ ಮಹಿಮೆಯತೆಂದಡೆ" ಇಲ್ಲಿ ಬಸವೇಶ್ವರರ ಉಲ್ಲೇಖವಿದ್ದು ಅವರು ಬಾಗೇವಾಡೀಪುರದ ಅಧಿಪತಿಯಾದ 'ಮಾದಿರಾಜನ ಮಗ'ನೆಂದು ಅಸ್ಖಲಿತವಾಗಿ ಹೇಳಲಾಗಿದೆ.

ಈ ಬಾಗವಾಡಿಯ ತದ್ದೇವಾಡಿ ನಾಡಿನ ಮಧ್ಯಗ್ರಾಮವೆಂದು ಇಲ್ಲಿ ಹೇಳಿದೆ. ತದ್ದೇವಾಡಿ ಅಂದರೆ ಇಂಡಿ ತಾಲೂಕಿನ ಭೀಮಾ ನದಿಯ ದಕ್ಷಿಣ ದಂಡೆಯ ಮೇಲಿರುವ ತದ್ದೇವಾಡಿಯೇ ಪ್ರಸ್ತುತ ಗ್ರಾಮವಾಗಿದೆ. ಈ ನಾಡಿಗೆ 'ತರ್ದವಾಡಿ ನಾಡು' ಎಂಬ ಉಲ್ಲೇಖ ಬರುತ್ತದೆ. ತರ್ದವಾಡಿ ನಾಡಿನಲ್ಲಿ ಸಾಂಪ್ರದಾಯಿಕವಾಗಿ ಸಾವಿರ ಹಳ್ಳಿಗಳಿದ್ದವು. ಆದುದರಿಂದ ಈ ನಾಡಿಗೆ 'ತರ್ದವಾಡಿ ಸಾಸಿರ' ಎಂದು ಮುತ್ತಗಿಯ ಶಿಲಾಶಾಸನದಲ್ಲಿ ಉಲ್ಲೇಖವಿದೆ. ಅದರ ದಕ್ಷಿಣಕ್ಕೆ 'ಕೆಲವಡಿ ಮೂನ್ನೂರು' ಕಿಸುಕಾಡು ಎಪ್ಪತ್ತು ಹಗರಟಗಿ ಮುನ್ನೂರ ಸಗರ ಐದನೂರ ಹಾಗೂ ಆಲಂದೆ ಸಾವಿರ ಎಂಬ ಹೆಸರಿನ ಪ್ರದೇಶಗಳು ಇರುವುದು ತಿಳಿದು ಬರುತ್ತದೆ. ಕೆಲವಡಿ ಗ್ರಾಮ ಮತ್ತು ಕಿಸುಕಾಡು ಬಾದಾಮಿ ತಾಲೂಕಿನಲ್ಲಿವೆ. ತದ್ದೇವಾಡಿ ಭಾಗವು ವಿಜಾಪೂರ ಜಿಲ್ಲೆಯಲ್ಲಿ ಇಂಡಿಯ ತಾಲೂಕಿನಲ್ಲಿರುವ ಪ್ರದೇಶ ಎಂಬುದು ಸ್ಪಷ್ಟ. ಈ ಭಾಗದ ಮಧ್ಯದಲ್ಲಿಯೇ ಈಗಿನ ಬಾಗೇವಾಡಿ ಗ್ರಾಮ ಇರುತ್ತದೆ. ಅದುವೆ ವಿಜಾಪೂರ ಜಿಲ್ಲೆಯ ಬಸವನ ಬಾಗೇವಾಡಿ ಎಂಬುದು ಸ್ಪಷ್ಟವಾದುದು ಎಂದು ಹೇಳಬಹುದಾಗಿದೆ.[೩೫]

ಬಸವಣ್ಣನವರ ವಂಶಾವಳಿಗೆ ಸಂಬಂಧಪಟ್ಟ ಕೆಲವು ಹೊಸ ವಿಷಯಗಳನ್ನು ಹೊರಗೆಡವಿದ ಈ ಶಾಸನ ಐತಿಹಾಸಿಕ ಹಾಗೂ ಚಾರಿತ್ರಿಕ ಮಹತ್ವವನ್ನು ಹೊಂದಿದೆ.

'ಸಂಗನ ಬಸವನ ಅಗ್ರ (ಜ. ಲ)ಂಗೈಕ್ಯ

ದೇವಾರಜ ಮುನಿಪನ ತನಯಂ ಜಂಗಮ ಪರುಸಂ (ಕಾವ)ರ

ಸಂಗಂ ಪ್ರಿಯಸುತನಿಪ್ಪಕಲಿ ದೇವರಸಂ ॥ ಕಲಿದೇವಮುನಿ

ಪನಾತ್ಮದ ಸತಿ ಮೊಜಗದೊಳಗೆ ಮಚವ ಮಾನವ ದೇವಂ ಗೆಲಿದಂ ಅಸ (ಶ)ನ

ಬೆಸನವಂ ಥಲರಧಿಕಂ ಹಾಲಬಸವಿದೇವ ಮುನೀಸಂ ॥

ಈ ಪದ್ಯದಿಂದ ವ್ಯಕ್ತವಾಗುವ ಬಸವಣ್ಣನವರ ವಂಶಾವಳಿಯನ್ನು ಹೀಗೆ ರೇಖಿಸಬಹುದು.




ಸಂಗನ ಬಸವಣ್ಣನ ಅಣ್ಣ ಲಿಂಗೈಕ್ಯರಾದ ದೇವರಾಜ ಮುನಿಪರ ಮಗನು ಜಂಗಮ ಪುರುಷರಾದ ಕಾವರಸರು. ಈ ಕಾವರಸರ ಶಿಷ್ಯರು (ಪ್ರೀತಿಯ ಮಗ) ಕಲಿದೇವರಸ. ಕಲಿದೇವರಸರ ಮಗ, ಹಾಲಬಸವಿದೇವರು ಎಂದು ಈ ಶಾಸನದಲ್ಲಿ ಬಸವಣ್ಣನವರ ನಾಲ್ಕು ತಲೆಮಾರಿನ ವಂಶಾವಳಿಯನ್ನು ಉಲ್ಲೇಖ ಮಾಡಿದೆ. ಇವರೆಲ್ಲರೂ ಕವಿಳಾಸಪುರದ ಅಧೀಶ್ವರರಾಗಿದ್ದರೆಂದು ಇಲ್ಲಿ ನಿರೂಪಿಸಲಾಗಿದೆ.

ವಚನಕಾರರು ಬಸವೇಶ್ವರರನ್ನು 'ಸಂಗನ ಬಸವ'ರೆಂದು ಕರೆಯುವುದುಂಟು. ಈ ಹೆಸರು ಅರ್ಜುನವಾಡ ಶಿಲಾಶಾಸನದಲ್ಲಿಯೂ ಉಲ್ಲೇಖಿತಗೊಂಡಿದೆ. ಶಾಸನದಲ್ಲಿ ಬಸವಣ್ಣನವರ ಕುರಿತು ಉಲ್ಲೇಖಿಸಿರುವ ಪುರಾತನ ಜಂಗಮ ಲಿಂಗೈಕ್ಯ ಭಕ್ತಿ ನಿರ್ಭರ ಲೀಲಾಸಂಗಂ ಸಂಗನ ಬಸವಂ" ಎಂಬ ವಿಶೇಷಣಗಳು ಅವರ ವ್ಯಕ್ತಿಸಿದ್ದಿಯ ಪ್ರಮುಖ ಅಂಶಗಳನ್ನು ಎತ್ತಿ ತೋರಿಸುತ್ತವೆ. ಈ ಶಿಲಾಶಾಸನದಿಂದ ಬಸವೇಶ್ವರರಿಗೆ ವಂಶಜರು ಇದ್ದರೆಂದು ಅವರು ಕಲ್ಯಾಣ ಪಟ್ಟಣ ಮತ್ತು ಬಸವನ ಬಾಗೇವಾಡಿಯನ್ನು (ಬಿಜಾಪೂರ ಜಿಲ್ಲೆ) ಬಿಟ್ಟು ಈ

"ಕವಿಳಾಸಪುರ"ದಲ್ಲಿ (ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನಲ್ಲಿ) ಬಂದು ನೆಲೆಸಿದ್ದರೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ.[೩೭]

ಈ ಶಾಸನದಲ್ಲಿ 'ಹಾಲಬಸವಿದೇವರನ್ನು 'ಮಹಾಮಹೇಶ್ವರ' 'ಮುನೀಶ್ವರ'ರೆಂತಲೂ ಕರೆಯಲಾಗಿದೆ. ಈ ವಿಶೇಷಣಗಳು ಅವರ ವಂಶಜರಿಗೆ ಬಳಸಲಾಗಿದೆ. ಕಾರಣ ಆ ಕಾಲದ ವೀರಶೈವರು ಮತ್ತು ಬಸವೇಶ್ವರರರ ವಂಶಸ್ಥರೆಲ್ಲರೂ ಒಂದು ಶ್ರೇಷ್ಠತರ ಧಾರ್ಮಿಕ ವರ್ಗದಲ್ಲಿ ಅತ್ಯಂತ ಆದರಣೀಯರಾಗಿದ್ದರು. ಅಲ್ಲದೇ ಪ್ರಾಪಂಚಿಕವಾಗಿದ್ದಾರೆಂದು ಸ್ಪಷ್ಟವಾಗಿ ವಿದಿತವಾಗುತ್ತದೆ.[೩೮]

ಹಾಲಬಸವಿ ದೇವರನ್ನು 'ಸವರ್ಣ ವೃಷಭ ಧ್ವಜ್' ವುಳ್ಳವರೆಂದು ಹೇಳಲಾಗಿದೆ. ಇವರ ವಂಶಕ್ಕೆ ಮೂಲಭೂತರಾದವರು ಬಸವೇಶ್ವರರಾಗಿದ್ದರಿಂದ ಅವರ ಗುರುತು ವೃಷಭರನ್ನು ಇವರು ತಮ್ಮ ನಿಶಾನೆಯಲ್ಲಿ ಇಟ್ಟುಕೊಂಡಂತೆ ತೋರುತ್ತದೆ. ಇವರು "ತ್ರಿಷಷ್ಠಿಪುರಾಥ (ತ) ಪಾದಾಚರಕ"ರೆಂದು ಹೇಳಲಾಗಿದೆ. ಅಂದರೆ ಅರವತ್ತುಮೂರು ಪುರಾತನರಿಗೋಸ್ಕರ ಭಕ್ತಿಯುಳ್ಳವರೆಂದು ಹೇಳಲಾಗಿದೆ.[೩೯] ಈ ಪುರಾತನರೆಲ್ಲರೂ ವೀರಶೈವರಿಗೆ ಯಾವಾಗಲೂ ಪೂಜ್ಯರಾಗಿರುತ್ತಾರೆ. ಇವರು "ಮಹಾಲಿಂಗ ಜಂಗಮ ಪ್ರಸಾದ ನಿಯತರು" ಎಂದು ಹೇಳಲಾಗಿದೆ. ಇವು ಅಷ್ಟಾವರಣಗಳಲ್ಲಿ ಬರುತ್ತಿದ್ದು ಅವುಗಳಿಗೆ ಒಳಪಟ್ಟು ನಡೆಯುವರೆಂದು ಇಲ್ಲಿ ಹೇಳಿದೆ. ಈ ರೀತಿ ಹಾಲಬಸವಿದೇವರ ವರ್ಣನೆ ಇದ್ದು ಅದು ಅವರ ಪೂರ್ವಜರೆಲ್ಲರಿಗೂ ಅನ್ವಯಿಸುತ್ತದೆ. ಈ ಶಾಸನದಲ್ಲಿ ಲಿಂಗ, ಜಂಗಮ, ಪ್ರಸಾದ, ಪುರಾತನರು, ಮಹೇಶ್ವರರು, ಗಣೇಶ್ವರ ಮೊದಲಾದ ಶಬ್ದಗಳು ಮೇಲಿಂದ ಮೇಲೆ ಬರುತ್ತವೆ. ಇವು ವೀರಶೈವ ಮತ ಗ್ರಂಥಗಳಲ್ಲಿ ಮಾತ್ರ ಉಪಲಬ್ದವಿರುವ ಪಾರಿಭಾಷಿಕ ಪದಗಳಾಗಿವೆ.

**ಅರ್ಜುನವಾಡ ಶಾಸನದ ಪಠ್ಯ**

೧. ನಮಸ್ತುಂಗಸಿ(ಶಿ)ರಶ್ಚುಂಬಿಚಂದ್ರಚಾಮರಚಾರ-

೨. ವೇ ತ್ರೈಲೋಕ್ಯನಗರಾರಂಭಮೂಲಸ್ತಂಭಾಯ ಶಂ-

೩. ಭವೇ ॥ ಶ್ರೀಯಂ ಶ್ರೀಕಲ್ಲಿನಾಥಂ ಕುಡು-

೪. ಗೆ ಭವಹರಂ ಭಕ್ತಬ್ರಿಂದಕೆ ಗೌರೀಜಾಯಾಕಾಯಾ-

೫. ನುಪಂಗಾಕಳಿತಲಳಿತತಾಪ್ರೋಲ್ಲ ಸದ್ವಾಮಭಾಗಂ ಸ್ವೀಯಸ್ವಾ-

೬. ಯತ್ತ ಶಕ್ತಿತ್ರಯಮಯಮಹಿಮಂ ದೇವದಾಯಾದಮಾ-

೭. ಯಾಪಾಯಾಭಿಪ್ರಾಲೀಲಂ ಪ್ರಣತಜನದುರಂತಾಘಸಂಘಟ್ಟಶೀಲಂ ॥

೮. ಮತ್ತಂ ತಧವಾಡಿ ಮಧ್ಯಗ್ರಾಮ ಬಾಗವಾಡೀಪುರವರಾಧೀಸ್ವರಂ ಮಾದಿರಾಜನ ತನೂ-

೯. ಜಂ ಬಸವರಾಜನ ಮಹಿಮೆಯೆಂತೆಂದೆಡೆ ॥ ಮಂಗಳಕೀರ್ತಿ ಪುರಾತನ ಜಂಗಮಲಿಂ-

೧೦. ಗೈಕಭಕ್ತಿನಿರ್ಭರಲೀಲಾಸಂಗಂ ಸಂಗನಬಸವಂ ಸಂಗತಿಯಂ ಮಾಳ್ಕೆ ಭಕ್ತಿಯೊಳು(ಳ)-

೧೧. ಗನವರತಂ ॥ ಯಾದವಭೂಮಿಪಾಳರಿಳೆಯಂ ಚತುರದ್ಧಿ(ಬ್ಧಿ) ಪರೀ-

೧೨. ತೆಯಂ ನಿಸರ್ಗೋದಯರಾಳ್ವರನ್ತವರೊಳಸ್ವಚಮೂಚಯವಾರ್ಧಿ ಸಿಂಹಣ-

೧೩. ಕ್ಷ್ಮಾ ದಯಿತಂ ತದಗ್ರತನಯಪ್ರಭವಂ ನೃಪ ಕಂನರಂ ಸಮಸ್ತೋದಧಿ-
೧೪. ವೇಳೆಯಿಂದ ಪೊಲಗೆ ಭೇಳ್ಗೊಡೆಯೊಳ್ನೆಳಲಂ ನಿಮಿರ್ಚ್ಚಿದಂ ॥ ಸಲೆ ಭೂದೇವ-
೧೫. ರ್ಕ್ಕಳ್ಗಿತ್ತಲಸದೆ ಗೋಭೂಮಿಹೇಮವಸ್ತ್ರಾದಿಗಳಂ ಮಲೆವರಸುಗಳೊ-
೧೬. ಳ್ಕೊಂಬಂ ಬಲವಂತಂ ಕಂನರಂ ಪ್ರತಾಪಸಹಾಯಂ ॥ ಸ್ವಸ್ತಿ ಸಮಸ್ತ-
೧೭. ಭುವನಾಶ್ರಯ ಶ್ರೀಪ್ರಿಥ್ವೀವಲ್ಲಭ ಮಹಾರಾಜಾಧಿರಾಜಪರಮೇ-
೧೮. ಶ್ವರ ಪರಮಭಟ್ಟಾರಕ ದ್ವಾರಾವತೀಪುರವರಾಧೀಶ್ವರ ಯಾ-
೧೯. ದವಕುಳಮಳಕಳಿಕಾವಿಕಾಭಾಸ್ಕರ ಯರಿರಾಯ-
೨೦. ಜಗಜ್ಝಂಪ ಮಾಳವರಾಯಮದನತ್ರಿನೇತ್ರ ಗೂರ್ಜ್ಜರರಾಯಭಯಂಕರ
೨೧. ತೆಲುಂಗರಾಯಸ್ಥಾಪನಾರ್ಯ್ಯ ಇತ್ಯಾದಿ ನಾಮಾವಳೀ ಸಮಾಳಂಕ್ರಿತ
೨೨. ಶ್ರೀಮತ್ಪ್ರೌಢಪ್ರತಾಪಚಕ್ರವರ್ತ್ತಿ ಶ್ರೀಕರಂನರದೇವಂ ದೇವಗಿ-
೨೩. ರಿಯ ನೆಲವೀಡಿನೊಳು ಸುಖಸಂಕಥಾವಿನೋದದಿನನವರತಂ ರಾ-
೨೪. ಜ್ಯಂ ಗೆಯ್ಯುತ್ತುಮಿರೆ [॥*] ತತ್ಪಾದಪದ್ಮೋಪಜೀವಿ ॥ ಚಿಕ್ಕನ ಚಿಕ್ಕಮಗಂ ವಿಭವಕ್ಕೆ
೨೫. ಕುಬೇರಂಗೆ ಸೆಣಸುವಂ ರಾಯರುಮಂ ಮಿಕ್ಕುಂ ಬೀಚುಗಿಯೌ
೨೬. ದಾರ್ಯಕ್ಕಾರಿಂ ಪಿರಿಯನಾತನಂಣಂ ಮಲ್ಲಂ ॥ ಆತನ ತನೂಭವಂ ॥
೨೭. ಚಾವುಂಡಂ ಪಾರ್ವ್ವತೀವಲ್ಲಭಚರಣಸರೋಜದ್ವಯಾವೋದಭ್ರಿಂಗಂ ಚಾವುಂ-
೨೮. ಡಂ ತ್ಯಾಗಭೋಗಾನುಭವಭವಸುಖಶ್ರೀವಧೂನ್ರಿತ್ಯರಂಗಂ ಚಾವುಂಡಂಸಾಮ
೨೯. ಭೇದಪ್ರಭ್ರುತಿ ಸಕಳಮಂತ್ರ(ತ್ರಾ)ಂಗವಿದ್ಯಾಸಮುದ್ರಂ ಚಾವುಂಡಂ ವೀರವೈರಿಪ್ರ-
೩೦. ಕರಸಮರಸಂಘಟ(ಟ್ಟ)ಕಾಳಾಗ್ನಿರುದ್ರಂ ॥ ಯೆನೆ ನೆಗಳ್ದಾ ಚಾವುಂಡನ ಮನದನ್ನಂ
೩೧. ನಾಗರಾಜನಕ್ಷಿ(ಖಿ)ಳ ನಿಯೋಗ[ಜ್ಞ]ನೆನಿಪ್ಪಂ ದಿವಾಕರದೇವನ ಪುತ್ರಂ ವಾಣಸಾನ್ವ-
೩೨. ಯಾಂಬರ ಮಿತ್ರಂ ॥ ತ್ಯಾಗಗುಣಕ್ಕೆ ತಾಯ್ವನೆ ಸಮಸ್ತನ್ರಿಪಾಳ ನಿಯೋಗವ-
೩೩. ರ್ತ್ತನಾಶ್ರೀಗೆ ನಿವಾಸಮಿಷ್ಟರ ವಿಶಿಷ್ಟರ ತೋಷಣಪೋಷಣಂಗಳೊಳ್ಬಾಗ-
೩೪. ರಮೆಂದು ಬಂಣ್ನಿಸುವುದೀ ಧರೆ ಪಂಡಿತಪಾರಿಜಾತನಂ ನಾಗನನಾ ಜನಾರ್ದ್ದನನಭಿ-
೩೫. ಕ್ತಿಭರಪ್ರಭವಾನುರಾಗನಂ ॥ ಸಂಗನಬಸವನ ಅಗ್ರ[ಜ ಲಿ]ಂಗೈಕಂ
೩೬. ದೇವರಾಜಮುನಿಪನ ತನೆಯಂ ಜಂಗಮಪುರುಸಂ [ಕಾ(ಸೋ?)ವ]ರ-
೩೭. ಸಂಗಂ ಪ್ರಿಸುತನೆನಿಪ್ಪ ಕಲಿದೇವರಸಂ ॥ ಕಲಿದೇವಮುನಿ-
೩೮. ಪನಾತ್ಮ ಜ ಸಲೆ ಮೂಜಗದೊಳಗೆ ಮೆರೆವ ಮಾನವದೇವಂ ಗೆಲಿದಂ ಅಸ(ಶ)ನ-
೩೯. ಪೆಸನವಂ ಛಲರಧಿಕಂ ಹಾಲಬಸವಿದೇವಮುನೀಸಂ ॥ ಸ್ವಸ್ತಿ ಸಮಸ್ತ-

೪೦. ಭುನಾಸ್ರೆಯಂ ಮಹಾಮಾಹೇಸ್ವರಂ ಕವಿಳಾಸಪುರ-
೪೧. ರಾಧೀಶ್ವರರುಂ ಸುವರ್ಂಣ್ನವ್ರಿಸಭಧ್ವಜಂ ತೇಸಠ್ಠಿಪುರಾರ್ಥತ)ಪಾದಾರ್ಚ್ಚಕ-
೪೨. ರುಂ ಮಹಾಲಿಂಗಜಣಗಮಪ್ರಸು(ಸಾ)ದನಿಯತರುಂ ಸಮ-
೪೩. ಯಭಕ್ತಿಸಂಪನ್ನ ಶ್ರೀಬಸವರಾಜನಂನ್ವಯರುಮಪ್ಪ ತಪಚಕ್ರ-
೪೪. ರ್ತ್ತಿ ವೀರಬ್ರತಿ ಹಾಲಬಸವಿದೇವಂಗೆ ಆ ಮಹಾಪ್ರಧಾನಂ ರ-
೪೫. ಟ್ಟರಾಜ್ಯಪ್ರತಿಷ್ಠಾಚಾರ್ಯ್ಯನುದುಪ್ಪ ನಾಗರಸರು ಸಕವರುಷಂ ಸಾಸಿರ-
೪೬. ದ ನೂರಯೆಂಭತ್ತ ಯೆರಡನೆಯ ಸಿದ್ಧಾರ್ಥ್ತಿ(ರ್ಥಿ) ಸಂಭಛರದ ಚೈ-
೪೭. ತ್ರ ಬಹುಳ ಅಮಾಸೆ ಸೋಮವಾರ ಸೂರ್ಯ್ಯಗ್ರಹಣದಲ್ಲಿ ಹುಲಿಗೆ-
೪೮. ರೆಯ ಸೋಮನಾಥದೇವರ ಸಂನಿಧಿಯಲ್ಲಿ ಆ ಚೌಡಿಸೆಟ್ಟಿಯರು
೪೯. ತೀರ್ತ್ಥವಿಶೇಸಮಂ ಬೆಸಗೊಳಲು ನೂಲೆನಾಡೊಳ[ಗಿ]ನ [ಮನಿತನದಿ] ಕವಿಳಲಸ ತೀ[ರ್ತ್ಥಂ]
೫೦. ನಾಲ್ಕು ಯುಗದ ಪುರಾಣೋಕ್ತದಿಂ ಬಂದ ಕ್ಷೇತ್ರವದೆಂತೆಂದಡೆ ಕ್ರಿತ[ಯು]-
೫೧. ಗದಲ್ಲಿ ಕವಿಳಾಸಮುನಿ ಕವಿಳಾನಾಥ ತ್ರತೆಯಲಲಿ ಅಂಕರಾಜಮುನಿ ಅಂಕ-
೫೨. ನಾಥ ದ್ವಾಪರದಲ್ಲಿ ಮಹಾರಾಜಮುನಿ ಮಹಲಿಂಗದೇವ ಕಲಿಯುಗದಲ್ಲಿ
೫೩. ಕಲಿರಾಜಮುನಿ ಕಲಿದೇವನಾಮ ಇ(ಈ) ಮುನಿಗಳು ಮುಕ್ಷ(ಖ್ಯ) ಸಮಸ್ತಗಣೇಸ್ವ-
೫೪. ರರು ಆರಾಧಿಸಿ ಸಾಲೋಕ್ಯ ಸಾರೂಪ್ಯ ಸಾಮೀಪ್ಯ ಸಾಯುಜ್ಜ(ಜ್ಯ)ಮಂ ಪಡೆ-
೫೫. ದರು ಆ ದೇವರಿಗೆ ಅಂಕನಾಥವೆಸರಿಂ ಅಂಕವಲ ತಳವಿರ್ತ್ತಿಕೊ-
೫೬. ತ್ತಸಿ ಕುರುವನಿಗೆ ಇ(ಈ) ಹಳ್ಳಿ ಮಾಂಧಾತ ಚಕ್ರವರ್ತ್ತಿ ಬಿಟ್ಟ ಧಂರ್ಮ್ಮ ಆ
೫೭. ತೀರ್ಥ್ಥ(ರ್ಥ)ಕ್ಕದು ಸಾಸನಸ್ಥವೆಂಬುದಂ ಚವುಡಿಸೆಟ್ಟಿಯರು ಕೇಳಿ(ಳ್)ದು ನಾಗ-
೫೮. ರಸರೂ ತಾವು ಏಕಸ್ಥರಾಗಿ ಕವಿಳಾಸಪುರದೊಳಗೆ ಸ್ವಯಂಭು ಮ-
೫೯. ಲ್ಲಿಕಾರ್ಜ್ಜುನ ಸಂಗಮೇಸ್ವರ ನಾಗೇಸ್ವರ ಯೀ ಮೂರು ಲಿಂಗಕಂ ಅಂಗ-
೬೦. ಭೋಗ ರಂಗಭೋಗ ಜೀರ್ಣ್ನೋದ್ಧಾರಕ್ಕಂ ಪಾರಣೆಯ ಜಂಗಮಾ-
೬೧. ರಾಧನೆಗಂ ಕೊತ್ತಸಿ ಕುರುವನಿಗೆ ತಳವಿರ್ತ್ತಿ[ಗೆ] ಅಂಕವಲ ಕೂಂಡಿ
೬೨. ನಾಡೊಳು ಸಲುವಂತೆ ಹೆಜ್ಜುಗಿಯ ಹಬ್ಬ ವೊ[ಂ]ಭತ್ತು [ದಾನ] ಸುಂಕ
೬೩. ನೂರೆತಿ(ತ್ತಿ)ನ ಪರಿಹಾರ ಯಿಂತಿನಿತುಮಂ ಸರ್ವ್ವಬಾಧಿ(ಧೆ)
೬೪. ಸರ್ವ್ವನಮಸ್ಯವಂ ಮಾಡಿ ಚವುಡಿಸೆಟ್ಟಿಯರು ನಾಗರಸರು
೬೫. ಯತಿರಾಯ ಹಾಲಸವಿದೇವಂಗೆ ಪೂರ್ವ್ವದತ್ತವೆಂದು
೬೬. ಧಾರಾಪೂರ್ವ್ವಕಂ ಮಾಡಿ ಕೊಟ್ಟರು [॥*] ಆ ಚವುಡಿಸೆಟ್ಟಿಯರ ನಿ-

೬೭. ಯಾಮದಿಂ ನಾಗರಸರು ಪುರದಿಂ ಪಡುವಲು ತೊರೆಯ ಕೂ-
೬೮. ಡಿದ ಹಳ್ಳನೀರುವರಿಎ ಮೇರೆಯಾಗಿ ಮೇಗೆ ಕಲುಕಂಟಿಗರೆರೆ
೬೯. ಬಸವಗೋಡಿ ಬಡಗಲು ಮೊಸರಗುತ್ತಿ[ಎ]ರಾರವಿಡಿದು ಮೂಡಲು
೭೦. ಜಂಬೆಗಲ್ಲ ಕಣಿ ಕುಚ್ಚಗೋಡಿಯಿಂ ಬಂದ ಹಳ್ಳನೀರುವರಿಎ ತೆಂಕ-
೭೧. ಲು ತೊರೆಯ ಕೂಡಲು ಯೀ ಚತುಸೀಮಾಭ್ಯಂತರ ಕವುಳಾಸಪು-
೭೨. ರಅ[ದ]ಲ್ಲಿ ಸುಂಕ ಸಾದ ತಳಸಾರಿಗೆ ಬಟೆಯ ಬಾಧೆ ಗ್ರಾಮಬ್ರಯ ನಿ-
೬೩. ಧಿನಿಕ್ಷೇಒ ಅಂಕಟಂಕ ಆಣೆಗೋಸನೆ ಮುದ್ರೆ ನಾಗೇಸ್ವರಕೆ ಮಲ್ಲೇಸ್ವರ-
೭೪. ಕೆ ಕುರುವನಿಗೆ ಸಂಗಮೇಸ್ವರಕೆ ಪಾರಣೆಯ ಜಂಗಮಾರಾಧ
೭೫. ನೆಗೆ ಕೊತ್ತಸಿಗೆ ಇ(ಈ) ಧರ್ಮ್ಮಕೆ ಇದು ವಿವರವೆಂದು ನಾಗರಸರು ಕೊಟ್ಟ
೭೬. ಸಾಸನ ನಾಲ್ಕುಂ ಪಟ್ಟಣಂಗಳು ನೂಲೆನಾಡೊಳಗೆ ಸಂತೆಗಳ
೭೭. ಅಯದಾಯ ಇಪಂತು ಕೋಣನ ಮೆಯಿದೆರೆ ಸುಂಕ ಹದಿನೆಂ-
೭೮. ಟ್ಟು ಸಮೆಯವು ಅರುವತಮೂವರು ಬಣಜು ಭಕುತಿ ಭೇದವಿ-
೭೯. ಲ್ಲ ಕವಿಳಾಸಪುರವೇ ಸಾಸನದ ಮನೆ ಬಸವರಾಜನೇ ಸಾಸನಿಗನೆಂ-
೮೦. ದು ವುಭಯನಾನಾದೇಸಿ ಮುಂವುರಿದಂಡಗಳು ಕೊಟ್ಟ [ಸಾ]ಸನ[॥*]

**ಕವಿಳಾಸಪುರ**

ಬಸವಣ್ಣನವರ ವಂಶಜರು ವಾಸಿಸುತ್ತಿದ್ದ 'ಕವಿಳಾಸಪುರ'ವು 'ನೂಲೆ' ನಾಡೊಳಗಿದ್ದು, 'ನೂಲೆನಾಡು" ಹುಕ್ಕೇರಿ ಚಿಕ್ಕೋಡಿ ತಾಲೂಕುಗಳ ೪೦ ಹಳ್ಳಿಗಳನ್ನು ಒಳಗೊಂಡಿದೆ. ಬೆಳಗಾವಿ ಜಿಲ್ಲೆಯ ಉತ್ತರ ಭಾಗ ಮತ್ತು ಮಹಾರಾಷ್ಟ್ರ ರಾಜ್ಯದ ಕೊಲ್ಲಾಪುರ ಜಿಲ್ಲೆಯ ದಕ್ಷಿಣ ಭಾಗವು 'ಕುಹುಂಡಿ' ಅಥವಾ "ಕೊಂಡಿ ಮೂರುಸಾವಿರ" ಪ್ರದೇಶ ಎಂಬ ಹೆಸರಿನಿಂದ ಶಾಸನಗಳಲ್ಲಿ ಉಲ್ಲೇಖವಾಗಿವೆ. ಈ ಸೀಮೆಯಲ್ಲಿ ನೂಲೆನಾಡು ಕಂಪಣ ಇತ್ತು.

ಅರ್ಜುನವಾಡ ಶಿಲಾಶಾಸನದಲ್ಲಿ ಯಾದವ ಭೂಪಾಲಕನಾದ ಸಿಂಘಣನ ಉಲ್ಲೇಖವಿದೆ. ಪ್ರತಾಪಶಾಲಿಯಾದ ಅವನು (೧೨೨೦-೧೨೪೭ರ ವರೆಗೆ) ದೇವಗಿರಿಯಿಂದ ಆಳಿದನು. ಈ ಮೊದಲು ಉತ್ತರ ಕರ್ನಾಟಕ ಪ್ರಾಂತ್ಯವನ್ನು ವಶಪಡಿಸಿಕೊಂಡು ಆಳಿದನೆಂದು ಇತಿಹಾಸದಿಂದ ತಿಳಿದುಬರುತ್ತದೆ. ಇವರ ಹಿರಿಯ ಮಗನಾದ ಕನ್ನರ ದೇವರನ ಆಳ್ವಿಕೆಯ (ಕಾಲ ಕ್ರಿ.ಶ. ೧೨೬೦)ನೆಯ ವರ್ಷವನ್ನು ಶಾಸನದಲ್ಲಿ ನಮೂದಿಸಿದೆ. ಈ ಅರಸನ ಕಾಲದಲ್ಲಿಯೇ ಅವರ ಮಂತ್ರಿಯಾದ ನಾಗರಸನು ಶಕವರ್ಷ ೧೧೮೨ನೆಯ ಸಿದ್ಧಾರ್ಥ ಸಂವತ್ಸರದ ಚೈತ ಬಹುಳ ಅಮವಾಸ್ಯೆ ಸೋಮವಾರ ಸೂರ್ಯಗ್ರಹಣ ಕಾಲದಲ್ಲಿ ಪುಲಿಗೆರೆಯ ಸೋಮನಾಥ ದೇವರ ಸನ್ನಿಧಿಯಲ್ಲಿ ಹಾಲಬಸವಿ ದೇವರಿಗೆ ದಾನ ಕೊಟ್ಟ ಉಲ್ಲೇಖ ಶಾಸನದಲ್ಲಿ ಉಕ್ತವಾಗಿದೆ.

ಚೌಡಿಸೆಟ್ಟಿಯರು ತೀರ್ಥ ಕ್ಷೇತ್ರದ ಮಹತ್ವ ಕೇಳಲು 'ನೂಲೆ' ನಾಡಿನಲ್ಲಿ ಕವಿಳಾಸತೀರ್ಥವು ನಾಲ್ಕು ಯುಗದಲ್ಲಿಯೂ, ಪುರಾಣದಲ್ಲಿಯೂ ಸ್ತುತಿಸಲ್ಪಟ್ಟ ಕ್ಷೇತ್ರವಾಗಿರುತ್ತದೆ. ಉಲ್ಲೇಖಿಸಲಾಗಿದೆ.

ಹೀಗೆ ಈ ಸ್ಥಳಕ್ಕೆ ಪಾವಿತ್ರ್ಯತೆ ಬಂದುದ್ದು ಅಲ್ಲಿನ ಕಲ್ಲಿನಾಥ ದೇವಸ್ಥಾನದಿಂದ. ಕೃತಯುಗದಲ್ಲಿ ಕವಿಳಾಸ ಮುನಿಯ ಅದನ್ನು ಪೂಜಿಸಿದ್ದರಿಂದ ಕವಿಳಾಸನಾಥಕ್ಕಿಂತಲೂ ತ್ರೇತಾಯುಗದಲ್ಲಿ ಅಂಕರಾಜಮುನಿ ಆರಾಧಿಸಿದ್ದರಿಂದ ಅಂಕನಾಥಕ್ಕಿಂತಲೂ ದ್ವಾಪರದಲ್ಲಿ ಮಹಾರಾಜಮುನಿ ಆರಾಧಿಸಿದ್ದರಿಂದ ಮಹಾಲಿಂಗ ದೇವನಕ್ಕಿಂತಲೂ ಕಲಿಯುಗದಲ್ಲಿ ಕಲಿರಾಜಮುನಿ ಆರಾಧಿಸಿದ್ದರಿಂದ ಕಲಿದೇವರಕ್ಕಿಂತಲೂ, ಈ ದೇವಸ್ಥಾನವು ಹೆಸರು ಪಡೆದಿತ್ತು. ಹೀಗೆ ಮುನಿಗಳು ಮುಖ್ಯ ಗಣೇಶ್ವರರು ಇಲ್ಲಿ ಆರಾಧಿಸಿ ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ ಪದವಿಯನ್ನು ಪಡೆದಿದ್ದರು. ಆದ್ದರಿಂದ ಆ ಕಾಲಕ್ಕೆ 'ಕವಿಳಾಸಪುರ' ಒಂದು ಪ್ರಸಿದ್ಧ ತೀರ್ಥ ಕ್ಷೇತ್ರವೆಂದು ಹೆಸರು ಪಡೆದಿತ್ತು.

ಆ ದೇವರಿಗೆ ಅಂಕನಾಥ ಹೆಸರಿನಿಂದ ಅಂಕವಲ ತಳವೃತ್ತಿ ಕೊಸ್ತಿಲ ಕುರುವನಿಗೆ ಈ ಹಳ್ಳಿಗಳನ್ನು ಮಂದಾತಚಕ್ರವರ್ತಿಯು ಬಿಟ್ಟು ಕೊಟ್ಟ ಧರ್ಮ. ಇದು ಈ ತೀರ್ಥಕ್ಷೇತ್ರಕ್ಕೆ ಶಾಸನವಾಗಿ ಕೊಟ್ಟಿತೆಂಬುದನ್ನು ಚೌಡೆಸೆಟ್ಟಿಯರು ಕೇಳಿ ನಾಗರಸರು ತಾವೂ ಕೂಡಿ ಕವಿಳಾಸಪುರದಲ್ಲಿ ಸ್ವಯಂಭು ಮಲ್ಲಿಕಾರ್ಜುನ ಸಂಗಮೇಶ್ವರ ಮತ್ತು ನಾಗೇಶ್ವರ ಹೀಗೆ ಮೂರು ಲಿಂಗಗಳ ಅಂಗಭೋಗ ರಂಗಭೋಗ ಗಳ ಜೀರ್ಣೋದ್ಧಾರಗಳಿಗಾಗಿ, ಪಾರಣೆಯ, ಜಂಗಮರ ಆರಾಧನೆಯ ಸಲುವಾಗಿ ಕೊತ್ತಸಿ ಕುರುವನಿಗೆ, ತಳವೃತ್ತಿ (ತಳವಿರ್ತಿ) ಅಂಕವಲ, ಕೊಂಡಿ ನಾಡಿನಲ್ಲಿ ಸಲ್ಲುವಂತೆ, ಹೆಜ್ಜುಗಿಯ (ಬೃಹತ್ ಶುಲ್ಕ) ಸುಂಕ, ನೂರೆತ್ತಿನ ಪರಿಹಾರ ಹೀಗೆ ಇವುಗಳನ್ನು ಸರ್ವಬಾಧಾ ಪರಿಹಾರವಾಗುವ ಉದ್ದೇಶಕ್ಕಾಗಿ (ತೆರಿಗೆ ಮೊದಲಾದ ಎಲ್ಲ ಬಗೆಯ ಬಾದೆಗಳಿಂದ ಸ್ವತಂತ್ರವಾಗಲು) ಚೌಡಿಸೆಟ್ಟಿಯೂ, ನಾಗರಸರೂ ಯತಿರಾಜನ ಹಾಲಬಸವಿದೇವರಿಗೆ ಮೊದಲಿಗೆ ಕೊಟ್ಟಿರುವುದನ್ನು ನವೀಕರಿಸಿ ಕೊಟ್ಟಿದ್ದಾರೆ.

'ಕವಿಳಾಸಪುರ' ಗ್ರಾಮ ಈಗ ಅಸ್ತಿತ್ವದಲ್ಲಿಲ್ಲ. ಪ್ರಸ್ತುತ ಅರ್ಜುನವಾಡ ಗ್ರಾಮದ ಸೀಮೆಯಲ್ಲಿದೆ. ಅಲ್ಲಿರುವ ಮಲ್ಲಿಕಾರ್ಜುನ, ಸಂಗಮೇಶ್ವರ ಮತ್ತು ನಾಗೇಶ್ವರ ಈ ಮೂರು ದೇವಸ್ಥಾನಗಳಿಗಾಗಿ ಅವುಗಳ ಅಧಿಕಾರಿ ಹಾಲಬಸವ ದೇವರಿಗೆ, ಕೊತ್ತಸಿ, ಕುರುವನಿಗೆ, (ಕುರಣಿ) ಮತ್ತು ಅಂಕವಲ (ಅರ್ಜುನವಾಡ ?) ಎಂಬ ಊರುಗಳನ್ನು ಮತ್ತು ಕೆಲವು ಕರ ಪರಿಹಾರಗಳನ್ನು ಲಕ್ಷ್ಮೇಶ್ವರದ ಸೋಮನಾಥನ ಸನ್ನಿಧಿಯಲ್ಲಿದ್ದುಕೊಂಡು ಮೇಲೆ ಹೇಳಿದ ಅಧಿಕಾರಿಗಳಿಬ್ಬರು ದತ್ತಿ ಬಿಟ್ಟುಕೊಟ್ಟಿದ್ದಾರೆಂದರೆ ಎಂದರೆ ಹಾಲಬಸವದೇವ ಮತ್ತು ಅವರ ಮನೆತನದವರು ಕ್ರಿ.ಶ. ೧೨೬೦ ಕ್ಕಿಂತ ಸ್ವಲ್ಪ ಮುಂಚಿನಿಂದಲೇ ಕವಿಳಾಸಪುರದಲ್ಲಿ ನೆಲೆಸಿದ್ದಾರೆಂದು ತಿಳಿದುಬರುತ್ತದೆ.

ಈ ಶಾಸನದಲ್ಲಿ ಬರುವ ಹಾಲಬಸವಿದೇವರು ಬಸವಣ್ಣನವರ ಅಣ್ಣ ದೇವರಾಜ ಮುನಿಯ ನೇತ ವಂಶಸ್ಥರಿದ್ದು ಅವರಿಂದ ನಾಲ್ಕನೆಯ ತಲೆಮಾರಿನವರೆಂದು ಖಚಿತವಾಗುತ್ತದೆ. ಅಂದರೆ ಬಸವಣ್ಣನವರ ಈ ಮನೆತನ ಪ್ರಸ್ತುತ ಕವಿಳಾಸಪುರದಲ್ಲಿ ಕ್ರಿ.ಶ. ೧೨೬೦ ಕ್ಕಿಂತ ಮುಂಚೆಯೇ ನೆಲೆಸಿದ್ದಿತು.

ಶಾಸನದ ಕೊನೆಯಲ್ಲಿ 'ಕವಿಳಾಸದಲ್ಲಿ ಸುಂಕ, ಸಾದ, ತಳಸಾರಿಗೆ, ಬಟ್ಟೆಬಾಧೆ ಗ್ರಾಮ ಭಯ ನಿಧಿನಿಕ್ಷೇಪ, ಅಂಕಟಂಕ ಆಣೆಗೋಸೆನೆ, ಮುದ್ರೆ, ನಾಗೇಶ್ವರಕೆ, ಮಲ್ಲೇಸ್ವರಕೆ, ಕುಲುವನಿಗೆ ಸಂಗಮೇಶ್ವರಕೆ, ಪಾರಣೆಯ, ಜಂಗಮಾರಾಧನೆಗೆ, ಕೊತ್ತಸಿಗೆ, ಈ ಧರ್ಮಕೆ ಇದು ವಿವರವೆಂದು

ನಾಗರಸರು ಕೊಟ್ಟ ಶಾಸನ ನಾಲ್ಕು ಪಟ್ಟಣಗಳು ನೂಲೆ ನಾಡೊಳಗೆ ಸಂತೆಗಳ ಆದಾಯ ಇಪರಿ ಕೋಣನಮೆಯಿದೆ. ಸುಂಕ, ಹದಿನೆಂಟು ಸಮೆಯವು ಅರುವತಮೂರು ಬಣಜುಭೆಕುತಿ ಭೇದವಿಲ್ಲ. ಕವಿಳಾಸಪುರವೇ ಶಾಸನದ ಮನೆ, ಬಸವರಾಜರೇ ಶಾಸನಿಕನೆಂದು ವೃಭಯನಾನಾದೇಸಿ ಮುಂಮುರಿ ದಂಡಂಗಳು ಕೊಟ್ಟ ಶಾಸನ ಎಂದಿದೆ.

ಹೀಗೆ ದೇವರಿಗೆ ದಾನ ಕೊಟ್ಟ ವಿಷಯಗಳನ್ನು ನೋಡಿದ್ದಾರೆ. ಅವೆಲ್ಲವೂ ಆಗಿನ ಕಾಲದ ನಾನಾ ಬಗೆಯ ಸುಂಕಗಳಿದ್ದ ಹಾಗೆ ತೋರುತ್ತದೆ. ಇದರ ಆಧಾರದ ಮೇಲಿಂದ ಕವಿಳಾಸಪುರವು ಆಗಿನ ಕಾಲಕ್ಕೆ ಒಂದು ದೊಡ್ಡ ವ್ಯಾಪಾರಿ ಪಟ್ಟಣವಾಗಿತ್ತೆಂದು ಹೇಳಬಹುದು. ಇಂತಹ ಸುಂಕಗಳ ಮೇಲೆಯೂ ಇರುವುದರಿಂದ ನಾಗರಸ ಮಹಾಪ್ರಧಾನರು ಹಾಲಬಸವಿ ದೇವರಿಗೆ ಕವಿಳಾಸಪುರದ ಸುಂಕಬಾಬುಗಳನ್ನು ಅಲ್ಲಿಯ ಚೌಡಿಶೆಟ್ಟಿಯರ ನಿಯಮದಿಂದ ದಾನವಾಗಿ ಕೊಟ್ಟಿರಬಹುದು.

ಇಂದು ಕವಿಳಾಸಪುರವು ಅಸ್ತಿತ್ವದಲ್ಲಿಲ್ಲ. ಆದರೆ ಕವಿಳಾಸಪುರದ ಮೊದಲಿನ ವಿಸ್ತಾರವು ಎಷ್ಟಿತ್ತೆಂಬುದನ್ನು ಈ ಶಿಲಾಶಾಶನದಿಂದ ಕಂಡು ಹಿಡಿಯಬಹುದು. ಹುಕ್ಕೇರಿ ಗ್ರಾಮದ ಪಶ್ಚಿಮಕ್ಕೆ ಮೂರು ಸಣ್ಣ ಹಳ್ಳಿಗಳಿವೆ. ಅವೆಲ್ಲವು ಹಿರಣ್ಯಕೇಶಿ ಹೊಳೆಯನ್ನು ಸೇರುತ್ತವೆ. ಈ ಮೂರು ಹಳ್ಳಿಗಳಲ್ಲಿ ಎಲ್ಲಕ್ಕೂ ಪಶ್ಚಿಮ ಕಡೆಯ ಹಳ್ಳವೇ ಕವಿಳಾಸಪುರದ ಪಶ್ಚಿಮ ಮೇರೆಯು, ಮೊಸರಗತ್ತಿ (ಮೊಸರಗುಪ್ಪಿ) ಗ್ರಾಮವೇ ಕವಿಳಾಸಪುರದ ಉತ್ತರ ನೇರೆಯು. ಈ ಗ್ರಾಮದ ಮೇರೆಗೆ ಹೊಂದಿ ಈಗ ಒಂದು ದೊಡ್ಡ ಗುಡ್ಡವು ಇದ್ದು, ಅಲ್ಲಿ ಒಂದು ಕಲ್ಲಣೀವೆಯೂ ಕೆರೆಯೂ ಮೊದಲು ಇರಬಹುದು. ಇದರ ಪೂರ್ವಕ್ಕೆ ಹಳ್ಳವು ಇದ್ದು ಇದರ ದಂಡೆಯೇ ಕವಿಳಾಸಪುರದ ಪೂರ್ವದ ಮೇರೆಯಾಗಿತ್ತು. ಈ ಹಳ್ಳವು ಹಿರಣ್ಯಕೇಶಿ ಹೊಳೆಯನ್ನು ಕೂಡಿದಂಥ ಸ್ಥಳವೇ ಇದರ ದಕ್ಷಿಣ ಮೇರೆಯಾಗಿತ್ತು. ಈ ಕವಿಳಾಸಪುರ ಕುರಣಿ, ಕೋಚರಿ, ಅಂಕವಲ (ಅರ್ಜುನವಾಡ ?) ಗ್ರಾಮಗಳಲ್ಲಿ ನೆಲೆಸಿದ್ದು ಅದರ ಸುಮಾರು ಎರಡು ಮೈಲು ಮತ್ತು ಅಗಲ ೧ ಮೈಲು ಇರಬಹುದು. ಈ ಪ್ರದೇಶವು ಹುಕ್ಕೇರಿ ನಗರದಿಂದ ಪಶ್ಚಿಮಕ್ಕೆ ಎರಡು ಮೈಲು ಅಂತರದ ಮೇಲೆ ಇದೆ.

ಈ ಶಾಸನದಲ್ಲಿ ಉಲ್ಲೇಖಿಸಿರುವ ಮಲ್ಲಿಕಾರ್ಜುನ, ಸಂಗಮೇಶ್ವರ, ನಾಗೇಶ್ವರ ಎಂಬ ಹೆಸರಿನ ದೇವಾಲಯಗಳಿಗೆ ಹಾಲಶಂಕರಲಿಂಗ, ಮೊಸರು ಶಂಕರಲಿಂಗ ಹಾಗೂ ಶಂಕರಲಿಂಗ ದೇವಾಲಯಗಳೆಂದು ಕರೆಯುತ್ತಾರೆ. ಪೂರ್ವಕ್ಕೆ ಅಭಿಮುಖವಾಗಿ ಹಾಲಶಂಕರಲಿಂಗ ಗುಡಿಯಿದೆ. ಮಣ್ಣಿನಿಂದ ಕಟ್ಟಿದ ಪ್ರಾಚೀನ ದೇವಸ್ಥಾನ ಇದಾಗಿದ್ದು, ದೇವಾಸ್ಥಾನದಲ್ಲಿ ಈಶ್ವರನ ಮೂರ್ತಿಯಿದೆ. ಹಾಲಬಸವಿದೇವರ ಸ್ಮರಣೆಗಾಗಿಯೇ ಹಾಲಶಂಕರಲಿಂಗ ಮೂರ್ತಿ ಪ್ರತಿಷ್ಠಾಪನೆಯಾಗಿರಬಹುದು. ಹಾಲಶಂಕರಲಿಂಗ ದೇವಸ್ಥಾನದ ಎದರುಗಡೆ ಇತ್ತೀಚೆಗೆ ಕಟ್ಟಿದ ದೇವಸ್ಥಾನವಿದೆ. ಇದು ಶಂಕರಲಿಂಗ ಅಥವಾ ಮೊಸರು ಶಂಕರಲಿಂಗ ದೇವಸ್ಥಾನ ಆಗಿರಬಹುದು. ಈಗ ಹಾಲು ಶಂಕರಲಿಂಗ ದೇವಸ್ಥಾನದ ಎದುರಿಗಿರುವ ಹುಣಸೇ ಮರದಡಿಯಲ್ಲಿಯೇ ಐದು ಶಿಲ್ಪಗಳಿದ್ದು, ಮೂರು ಶಿಲ್ಪಗಳಲ್ಲಿ ನಾಗದ ಭಾವಚಿತ್ರವಿದ್ದರೆ, ಒಂದರಲ್ಲಿ ಎರಡು ಆನೆಗಳು ಎದುರುಬದುರು ಇದ್ದು, ಮಧ್ಯದಲ್ಲಿ ವಿಘ್ನೇಶ್ವರನ ಭಾವಚಿತ್ರವಿದೆ. ಇನ್ನೊಂದು ಶಿಲ್ಪವಿದ್ದು ಅದು ಸಂಪೂರ್ಣವಾಗಿ ಅಳಿಸಿಹೋಗಿದೆ. ಆದ್ದರಿಂದ ಇಲ್ಲಿಯ ಭೂಪ್ರದೇಶವನ್ನು ಉತ್ಖನನ ಮಾಡಿದರೆ ಪ್ರಾಚೀನ ದೇವಸ್ಥಾನಗಳ ಅವಶೇಷಗಳು ದೊರೆಯಬಹುದು.

ಇನ್ನೊಂದು ವಿಶೇಷ ಸಂಗತಿಯೇನೆಂದರೆ ಹಾಲಬಸವಿದೇವರಿಗೆ ದಾನಕೊಟ್ಟ ನಾಗರಾಜ ಮಂತ್ರಿಜ "ಜನಾರ್ಧನನ ಭಕ್ತಿ ಭರಪ್ರಭಾನುರಾಗ"ರೆಂದೂ ಹೇಳಿದೆ. ಅಂದರೆ ಅವರೊಬ್ಬ ವಿಷ್ಣು ಭಕ್ತರಾಗಿದ್ದು, ಶಿವಭಕ್ತಿಯುತ ಹಾಲಬಸವಿ ದೇವರಿಗೆ ದಾನವನ್ನು ಕೊಟ್ಟಿದ್ದಾರೆ. ಇದರಿಂದ ಕನ್ನಡಿಗನಲ್ಲಿಯೂ ಪರಧರ್ಮಸಹಿಷ್ಣುತೆ ಕಂಡು ಬರುತ್ತದೆ. ಅಲ್ಲದೇ ಬಸವೇಶ್ವರರ ವಂಶಜರು ಆ ಕಾಲಕ್ಕೆ ರಾಜರಲ್ಲಿಯೂ ಎಲ್ಲರ ವರ್ಗದವರಲ್ಲಿಯೂ ಆದರಣೀಯರಾಗಿದ್ದರೆಂದೂ ವಿಧಿತವಾಗುತ್ತದೆ.

ಈ ಶಿಲಾಶಾಸನದಲ್ಲಿ ಬಸವೇಶ್ವರನ ಉಲ್ಲೇಖವಿರುವ ವರ್ಣನಾತ್ಮಕ ವಾಕ್ಯಗಳಲ್ಲಿ "ವೀರಶೈವ ಮತ ಸ್ಥಾಪನಾಚಾರ್ಯ" ಇತ್ಯಾದಿ ವಾಕ್ಯಗಳಿರದೆ ಅದರ ಬದಲು ಅವರನ್ನು ಪುರಾತನ ಜಂಗಮ ಲಿಂಗೈಕ್ಯ ಭಕ್ತಿ ನಿರ್ಭರ ಲೀಲಾಸಂಗ ಎಂದು ಮುಂತಾಗಿ ವರ್ಣಿಸಿದೆ. ಆದ್ದರಿಂದ ಇಲ್ಲಿ ಉಲ್ಲೇಖವಿರುವ ಬಸವರಾಜರು ವೀರಶೈವ ಮತೋದ್ಧಾರಕರಾದ ಬಸವೇಶ್ವರರೇ ಎಂಬುದು ವಿಧಿತವಾಗುತ್ತದೆ. ಹೀಗೆ ಬಸವಣ್ಣನವರು ಹಾಗೂ ವಂಶಾವಳಿಗೆ ಸಂಬಂಧಪಟ್ಟ ಕೆಲವು ಮಹತ್ವದ ಸಂಗತಿಗಳನ್ನು ಅರುಹಿದ ಈ ಶಾಸನ ಬಸವಣ್ಣನವರ ಬಗ್ಗೆ ಅಧಿಕೃತ ದಾಖಲೆಯಾಗಿದೆ.[೧೦]

**ಅಮ್ಮಣಗಿ ಶಾಸನ**

ಅಮ್ಮಣಗಿಯ ಮಲ್ಲಿಕಾರ್ಜು ದೇವಸ್ಥಾನದ ಶಾಸನವು ಇತ್ತೀಚಿನ ಅಕ್ಷರಗಳಲ್ಲಿ ಅಲ್ಲಿಯ ಪವಿತ್ರ ಕೊಳದಲ್ಲಿ ಸ್ನಾನ ಮಾಡಿದವರಿಗೆ ತಗಲುವ ಶಾಪವನ್ನು ವಿವರಿಸುತ್ತದೆ. ರಾಮಲಿಂಗ ದೇವಾಲಯದ ಕ್ರಿ.ಶ. ೧೨೫೭ರ ಶಾಸನವು ತ್ರುಟಿತಗೊಂಡಿದ್ದು ಯಾವುದೋ ದೇವತೆಯ ದೇವಾಲಯದ ವ್ಯವಸ್ಥೆಗಾಗಿ ಮಹಾಜನರಿಂದ ಭೂಮಿಯನ್ನು ಖರೀದಿಸಿದಾಗ ಕೊಟ್ಟ ಉಲ್ಲೇಖವಿದೆ.

**ಭೈರಾಪುರ ಶಾಸನ**

ಭೈರಾಪೂರದ ಶಾಸನದಲ್ಲಿ ರಟ್ಟ ಮಹಾಮಂಡಲೇಶ್ವರ ವೀರಲಕ್ಷ್ಮೀ ದೇವರಸನು ವೇಣುಗ್ರಾಮದಿಂದ ಆಳುತ್ತಿದ್ದನೆಂದು ತಿಳಿಸಿದೆ. ಕ್ರಿ.ಶ. ೧೨೫೭ರ ಶಾಸನ ರಾಣಿ ಲಲಿತೆಯ ದೇವಿಯು ತನ್ನ ಆಡಳಿತಕ್ಕೊಳಪಟ್ಟ ಮತ್ತಿವಾಡದಲ್ಲಿ ಬಣೆಂಬಗಾಗಿ ಭೂಮಿ, ಮನೆ, ನಿವೇಶನಗಳನ್ನು ನಾಕೇಶ್ವರದ ಮೂವತ್ತಿರ್ಚ್ಛಾಸಿರ ಛತ್ರಕ್ಕಾಗಿ ಮಹಾಪ್ರಧಾನ ಸೇನಾಧಿಪತ ನಾಗೆಯ ನಾಯಕನಿಗೆ ನೀಡಿದಳೆಂದು ತಿಳಿಸುತ್ತದೆ.

**ಕೋಚರಿಯ ಶಾಸನ**

ಕೋಚರಿಯ ಮಾರುತಿ ದೇವಾಲಯದ ಶಾಸನವು ಕಲ್ಯಾಣ ಚಾಲುಕ್ಯ ತ್ರೈಲೋಕ್ಯಮಲ್ಲಿದೇವನ ಕಾಲದ್ದಾಗಿದ್ದು ಕ್ರಿ.ಶ. ೧೦೫೭ರ ಶಾಸನವು ಬಹಳಷ್ಟು ತ್ರುಟಿತಗೊಂಡಿದ್ದು ತ್ರಿಕೂಟೇಶ್ವರ ದೇಗುಲಕ್ಕೆ ಬಿಟ್ಟ ದತ್ತಿಯನ್ನು ಉಲ್ಲೇಖಿಸುತ್ತದೆ.

**ಬೆಳ್ಳಂಬಿ ಶಾಸನ**

ಬೆಳ್ಳಂಬಿ ಶಾಸನವು ರಟ್ಟ ಅಂಕರಸಯ್ಯನ ಕ್ರಿ.ಶ. ೧೦೫೩ರ ಕಾಲದ್ದಾಗಿದ್ದು, ಬ್ರಾಹ್ಮಣರಿಗಾಗಿ ಸತ್ರವನ್ನು ನಡೆಸಲು ಊರೊಡೆಯ ಕಾಳಿದಾಸಯ್ಯನ ನೇತೃತ್ವದ ಬೆಳುವಬ್ಬೆರ್ಯಂ ಜನ ಮಹಾಜನರಿಗೆ ಹಣದಾನ ನೀಡಿದುದನ್ನು ತಿಳಿಸುತ್ತದೆ. ಈ ಶಾಸನದ ಪೂರ್ಣ ಪಠ್ಯವನ್ನು ಈ ಲೇಖನದಲ್ಲಿ ನೀಡಲಾಗಿದೆ. ಇಲ್ಲಿಯೇ ದೇವಗಿರಿಯ ಯಾದವ ಕೃಷ್ಣದೇವನನ್ನು ಹೆಸರಿಸುತ್ತಾ

ಬೆಳ್ಳಂಬಿ ಗ್ರಾಮದೇವತೆಗೆ ನಿವೇಶನ ಮತ್ತು ಗಾಣಗಳನ್ನು ನೀಡಿದ್ದನ್ನು ತಿಳಿಸುವ ಇನ್ನೊಂದು ಮರಾಠಿ ಶಾಸನ ದೊರೆತಿದೆ.

**ಸಂಕೇಶ್ವರ ಶಾಸನ**

ಸಂಕೇಶ್ವರದಲ್ಲಿ ಶಂಕರಲಿಂಗನ ಗುಡಿಯಿಂದ ಹಿರಣ್ಯಕೇಶಿ ನದಿಗೆ ಹೋಗುವ ಮಾರ್ಗದಲ್ಲಿ ಒಂದು ವೀರಗಲ್ಲಿದೆ ಹಾಗೂ ಎ.ಪಿ.ಎಂ.ಸಿ.ಯ ಗೋಡೆಗೆ ಆನಿಸಿ ವೀರಗಲ್ಲೊಂದನ್ನು ಇಡಲಾಗಿದೆ. ಶಂಕರನಾರಾಯಣ ಗುಡಿಯ ಸುಕನಾಶಿಯ ಒಳಭಿತ್ತಿಯಲ್ಲಿ ಶಾಸನವೊಂದನ್ನು ಸೇರಿಸಿ ಕಟ್ಟಲಾಗಿದ್ದು, ಇತ್ತೀಚೆಗೆ ಜೀರ್ಣೊದ್ಧಾರ ನಡೆಸಿದ ಸಂದರ್ಭದಲ್ಲಿ ಸಿಮೆಂಟು ಮತ್ತು ಮಾಲು ಬಿದ್ದು ಓದಲು ಕಷ್ಟಸಾಧ್ಯವಾಗಿದೆ. ಅದರ ಲಭ್ಯವಿರುವ ಪಠ್ಯವನ್ನು ಈ ಲೇಖನದಲ್ಲಿ ಕೊಡಲಾಗಿದೆ. ಇದಲ್ಲದೆ ಹೊರಭಿತ್ತಿಯಲ್ಲಿ ಲಿಪಿಕಾರ್ತಿಯ ವಿಗ್ರಹವಿದ್ದು ಅದರ ಕೆಳಗಿರುವ ಶಾಸನದ ಪಠ್ಯವನ್ನು ಇಲ್ಲಿ ಕೊಟ್ಟಿದೆ.

ಉಳ್ಳಾಗಡ್ಡಿ ಖಾನಾಪುರದಲ್ಲಿ ದೊರೆತ ಐತಿ ಶಾಸನಗಳ ಪಠ್ಯಗಳನ್ನು ಡಾ.ಎಂ.ಬಿ. ನೇಗಿನಾಳ ಅವರು ಹಂಪಿ ವಿಶ್ವವಿದ್ಯಾಲಯದ ಶಾಸನಾಧ್ಯಯನ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಇನ್ನೊಂದು ಸೌದತ್ತಿ ರಟ್ಟರ ಕಾಲದ ಹೊಸ ದಾನಶಾಸನವು ಅಲ್ಲಿಯೇ ದೊರೆತಿದೆ. ಇವುಗಳಲ್ಲಿ ಬೆಳವಿ ಶಾಸನವೊಂದನ್ನು ಹೊರತುಪಡಿಸಿ ಉಳಿದವುಗಳ ಶಾಸನವು ಅಸ್ಪಷ್ಟವಾಗಿದೆಯೆಂಬುದನ್ನು ಗಮನಿಸಬೇಕು. ಲಭ್ಯವಿರುವ ಈ ಶಾಸನಗಳ ಪಠ್ಯವು ಹೀಗಿದೆ.

**ಬೆಳವಿಯ ಶಾಸನ ಕ್ರಿ.ಶ. ೧೦೫೧**

ಹುಕ್ಕೇರಿ ತಾಲೂಕಿನ ಬೆಳವಿ ಗ್ರಾಮದಲ್ಲಿ ಶಾಸನವೊಂದು ಇದೆ. ಎ.ಆರ್.ಎಸ್.ಐ.ಇ. ೧೯೪೨-೪೩ನೆಯ ಸಾಲಿನ ವರದಿಗಳಿಂದ ತಿಳಿದು ಬರುತ್ತದೆ. ಈ ಶಾಸನವು ರಟ್ಟ ಅಂಕರಸಯ್ಯನ ಕ್ರಿ.ಶ. ೧೦೫೩ರ ಕಾಲದ್ದಾಗಿದ್ದು ಬ್ರಾಹ್ಮಣರಿಗಾಗಿ ಪತ್ರವನ್ನು ನಡೆಸಲು ಊರೊಡೆಯ ಕಾಳಿದಾಸಯ್ಯನ ನೇತೃತ್ವದ ಬೆಳುವಬ್ಬೆಯ ೫೦ ಜನ ಮಹಾಜನರಿಗೆ ಹಣದಾನ ನೀಡಿದುದನ್ನು ತಿಳಿಸುತ್ತದೆ.

**ಶಾಸನದ ಪಠ್ಯ**

೧. ಜಯತ್ಯಾವಿಕೃ(ಷ್ಕೃ)ತಂ ವಿಷ್ಣೋರ್ವ್ವರಾಹ[೦] ಕ್ಷೋಭಿತಾರ್ಣ್ನ

೨. ವಂ ದಕ್ಷಿಣೋನ್ನತ ದುಷ್ಟ್ರಾಗ್ರ ವಿಶ್ರಾನ್ತ ಭುವನಂ

೩. ವಪು[ಃ] ॥ ಸ್ವಸ್ತಿ ಸಮಧಿಗತ ಪಞ್ಚಮಹಾಶ-

೪. ಬ್ದ ಮಹಾಸಾಮನ್ತಂ ವಿಜೆಯಲಕ್ಷ್ಮೀಕಾನ್ತಂ

೫. ತ್ರಲೋಕ ಷುವರೇಸ್ವರ ಪ್ರತಾಪ ಲಂಕೇ-

೬. ಸ್ವರ ರಟ್ಟಕುಳಭೂಣಂ ತರಿವಳೆಪಜೆ ಘೋಶ-

೭. ಣಂ[ಸಿ*]ನ್ದುರ ಲಾಞ್ಛನಂ ಸುವರ್ಣ್ನ ಗರುಡಧ್ವಜಂ

೮. ಸಹಜ ಮಖರಧ್ವಜಂ ದೆಪ್ಪವಾಳೆ ಧೂಮಕೇ-

೯. ತು ರಾಜಿಗ ದಿಸಾಪಟ್ಟ ಮನ್ನೆಯವಘ ದರ್ಪ್ಪ-

೧೦. ದಳನ ದಿನ್ದುಗನ ಬಣ್ಣಾಜಿ ಪನ್ನಳೆಯ ಮಾ–
೧೧. ರಸಿಂಘ ಮದಗಜ ವಾರಣಾದಿವಾತ ಮನ್ನೆ–
೧೨. ಯ ದಾಳಿದಳವಂ ಬೆಂಕೊಳ್ವಂ ನಾಮಾದಿ ಸಮಸ್ತ
೧೩. ಪ್ರಶಸ್ತಿ ಸಹಿತಂ ಶ್ರೀಮನ್ಮಹಾಸಾಮನ್ತ–
೧೪. ನಂಕಯ್ಯರಸರ್ ॥ ಯಮ ನಿಯಮ ಸ್ವಾಧ್ಯಾಯ
೧೫. ಧ್ಯಾನ ಧಾರಣ ಮೋನಾನುಷ್ಠಾಣಯನ್ಯ ದೀಕ್ಷಾದ್ಯ–
೧೬. ನೇಕ ಬ್ರತ ಸತ್ಯಸೇವಾಚಾರ ಜಪ ಸಮಾಧಿ ಸಂ–
೧೭. ಪನ್ನರಪ್ಪ ಶ್ರೀಮತು ಬೆಳ್ವಬ್ಬೆಯೂರೊಡೆಯ
೧೮. ಕಾಳಿದಾಸಯ್ಯ ಪ್ರಮುಖ ಮಹಾಜನಮಯ್ನೂ–
೧೯. ರ್ವ್ವಗ್ಗೆ ಸಖವರಿಷ ೯೭೩ನೆಯ ಖರನೆಂಬ್ವೊ ಸಂವತ್ಸ–
೨೦. ರದ ಶ್ರಾವಣ ಬಹುಳ ತದಿಗೆ ಸಂಕ್ರಾನ್ತಿಯಾದಿ–
೨೧. ತ್ಯವಾರದನ್ದು ಪದಿಂಬರ್ ಬ್ರಾಹ್ಮಣರ್ಗ್ಗಂ ಸ–
೨೨. ತ್ರಕ್ಕೆ ಬಿಟ್ಟ ಗದ್ಯಾಣವಿಪ್ಪತ್ತುಪಣಂ ಬಣ್ಣಾದಾ–
೨೩. ನಂ ತಿಱುವ ಗದ್ಯಾಣ ಮಾಱುವಂತಾ–
೨೪. ಚನ್ದ್ರಾರ್ಕ್ಕ ತಾರಂಬರಂ ತಪ್ಪದೆ ಪ್ರತಿಪಾ–
೨೫. ಳಿಸುವರ್ ॥ ನೆವದಿಂದಿನ್ತಿದನಳಿದ
೨೬. ದಿವಿಜರನಳಿದಂ ಜಾತಸ್ಥರೆನಿಪರನಳಿದ
೨೭. ಕವಿಲೆಯನಳಿದಂ ಸಲೆ ರೌರವಾವದೆದ–
೨೮. ಳಿದಂ ಪ್ರಯಾಗೆಯೊಳೆ ಬ್ರಾಂಹ್ಮಣರಂ ॥
೨೯. ಬಹುಭಿರ್ವ್ವಸುಧಾ ಭುಕ್ತಾರಾಜಭಿಸ್ಸಗರಾ–
೩೦. ದಿಭಿ [ಃ] ಯಸ್ಯ ಯಸ್ಯ ಯದಾ ಭೂಮಿ ತಸ್ಯ
೩೧. ತಸ್ಯ ತದಾ ಫಳಂ ॥ ಸ್ವದತ್ತಾಂ ಪರದತ್ತ(ತಾಂ)
೩೨. ವಾಯೋ ಹರೇತಿ ವಸುನ್ಧರೀ ಷಷ್ಟಿರ್ವ್ವರಿಶ
೩೩. ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ[ಃ] ॥
೩೪. ನ ವಿಷಂ ವಿಷಮಿತ್ಯಾಹುಃ ದೇವಸ್ವಂ ವಿಷ–
೩೫. ಮುಚ್ಯತೇ ವಿಷಮೇಕಾಕಿನಂ ಹನ್ತಿ ಬ್ರಹ್ಮ–
೩೬. ಸ್ವಂ ಪುತ್ರ ಪೌತ್ರಕಂ

**ಸಂಕೇಶ್ವರ ಲಕ್ಷ್ಮೀನಾರಾಯಣ ಗುಡಿಯ ಲಿಪಿಕಾರ್ತಿ ವಿಗ್ರಹ**

೨೪" ಎತ್ತರ ಹಾಗೂ ೮" ಅಗಲ ಗಾತ್ರದ ಶಿಲಾಬಾಲಿಕೆಯ ಸುಂದರ ವಿಗ್ರಹದ ಮೇಲೆ ಈ ಶಾಸನವನ್ನು ಕೆತ್ತಲಾಗಿದೆ. ಲಿಪಿಕಾರ್ತಿಯು ಹಿಡಿದ ಈ ಶಾಸನದ ಲಿಖಿತ ಫಲಕವು ೬ ಅಗಲ ಮತ್ತು ೨ ಎತ್ತರ ಗಾತ್ರದ್ದಾಗಿದೆ. ಶಾಸನದ ಪಠ್ಯವು ಹೀಗಿದೆ –

೧) ಎಯುಕ್ತಿ ಕರ್ಮಹೀನಸ್ಯ ಬ್ರಾ

೨) ಹ್ಮಣೇನ ಪೂಜಏತೆ ಸಾ ಪು

೩) ಹೀನೋ ಕುಲೀನಸ್ಯ ವಿಪ್ರಕೂ

೪) ಪ ನ ಪೂಜಏತೆ

**ಸಂಕೇಶ್ವರ ಲಕ್ಷ್ಮೀನಾರಾಯಣ ಗುಡಿಯ ಸುಕನಾಶಿಯ ಭಿತ್ತಿಯಲ್ಲಿ**

೨೪" ಅಗಲ ೨೦" ಎತ್ತರದ ಕರಿಕಲ್ಲಿನ ತುಣುಕು ಮಾತ್ರ ಈಗ ಕಾಣುತ್ತದೆ. ಯಾವುದೇ ಚಿತ್ರಗಳಿಲ್ಲ. ಕಲ್ಯಾಣ ಚಾಲುಕ್ಯರ ಮಹಾಮಂಡಲೇಶ್ವರರಾದ ಸೌದತ್ತಿಯ ರಟ್ಟ ಅರಸು ಕಾರ್ತವೀರ್ಯದೇವರಸರ ಕಾಲದಲ್ಲಿ ಬ್ರಹ್ಮಪುರಿಯ ವಿಶೇಷ ಮಹಾಜನಗಳಿಗೆ ಶ್ರೀ ಲಕ್ಷ್ಮೀನರಸಿಂಹದೇವರ ಅಷ್ಟವಿಧಾರ್ಚನೆಗಾಗಿ ಬಿಟ್ಟ ಸುಂಕದತ್ತಿ ಮತ್ತು ಚಿಕ್ಕೇಶ್ವರ ದೇವರಿಗಾಗಿ ಬಿಟ್ಟ ಹಣ ದಾನವನ್ನು ತಿಳಿಸುತ್ತದೆ.

**ಹೊಂಗಲ, ಗುತ್ತಲ ಎಂಬ ಊರುಗಳ ಹೆಸರುಗಳು :** ಪನ್ನಿಸೆಟ್ಟಿ, ಸಾತಿಸೆಟ್ಟಿ, ಆದಿಸೆಟ್ಟಿ, ವಾಗ್ಮಿಸೆಟ್ಟಿ, ಹಲಿಸೆಟ್ಟಿ, ಚಾಯಿಸೆಟ್ಟಿ, ಬಮ್ಮಿಸೆಟ್ಟಿ, ಪಾರಿಸೆಟ್ಟಿ, ನಾಗಿಸೆಟ್ಟಿ, ಬೆಳ್ಳೆಯಮಸೆಟ್ಟಿ, ಕೇತಿಸೆಟ್ಟಿ, ಹೂಚೆಸೆಟ್ಟಿ, ಕನ್ನಸೆಟ್ಟಿ, ದೇವಿಸೆಟ್ಟಿ, ಗುಡ್ಡಿಸೆಟ್ಟಿ, ಯೀಶ್ವರಸೆಟ್ಟಿ ಮತ್ತು ವಿಷ್ಣುಘೆಸ ಎಂಬ ವ್ಯಕ್ತಿನಾಮಗಳು. ಹೆಗ್ಗಡೆ (ಪೆರ್ಗಡೆ) ಎಂಬ ಅಧಿಕಾರಿ, ಹೆಗ್ಗವರೆ ಸೆಟ್ಟಿಗುತ್ತ ಎಂಬ ವರ್ತಕ ಪ್ರಕಾರದ ಹೆಸರುಗಳು ಗಮನ ಸೆಳೆಯುತ್ತವೆ.

**ಉಳ್ಳಾಗಡ್ಡಿ ಖಾನಾಪೂರ ಗ್ರಾಮದ ಶಾಸನಗಳು**

**ಶಾಸನ ನಂ. ೧**

ಖಾನಾಪೂರ ಗ್ರಾಮದ ಶ್ರೀ ಆಂಜನೇಯ ಸ್ವಾಮೀ ಮಂದಿರದ ದೀಪಸ್ತಂಭದ ಹತ್ತಿರವಿರುವ ಈ ಶಾಸನವು ಕನ್ನಡ ಲಿಪಿ ಮತ್ತು ಕನ್ನಡ ಭಾಷೆಯನ್ನು ಹೊಂದಿದೆ. ಈ ಶಾಸನದಲ್ಲಿ ಹತ್ತು ಸಾಲುಗಳಿವೆ.

ಶ್ರೀ ಮತ್ಥರಮ ಗಂಭೀರ ಸ್ಯಾದ್ವಾದಾಮೋಘಲಾಂಛನಮ್

ಜೀಯಾತ್ ತ್ರಲೋಕ್ಯ ನಾಥಸ್ಯಶಾಸನಂ ಜಿನ ಶಾಸನಂ ॥

ಜೈನ ಸಿದ್ಧಾಂತಕ್ಕೆ 'ಸ್ಯಾದ್ವಾದ' ಎಂಬುದ ಹೆಸರಿದೆ. ಆನರ ಏಳು ಸಿದ್ಧಾಂತಗಳಲ್ಲಿ ಉಲ್ಲೇಖಿತ ಸಿದ್ಧಾಂತ ಅಂದು ಪ್ರಾಮುಖ್ಯತೆಯನ್ನು ಪಡೆದುಕೊಂಡಿತು.

ಕಲ್ಯಾಣದಲ್ಲಿ ೬ನೆಯ ವಿಕ್ರಮಾದಿತ್ಯ ಚಾಲುಕ್ಯ ಸಾಮ್ರಾಜ್ಯವನ್ನು ಆಳುತ್ತಿರುವ ಸಂದರ್ಭದಲ್ಲಿ ರಟ್ಟರ ಮಹಾಸಾಮಂತನಾದ ನನ್ನ ಭೂಪಾಲನ ವಂಶಸ್ಥರಾದ ಎರಡನೆಯ ಕಣ್ಣ ಚಾಲುಕ್ಯ ವಿಕ್ರಮಾದಿತ್ಯನ ಕ್ರಿ.ಶ. ೧೦೭೬ ರಿಂದ ಕ್ರಿ.ಶ. ೧೧೨೬ ಸಾಮಂತನೆಂದು ಉಲ್ಲೇಖಿಸಿದೆ.

ಇದರ ಜೊತೆಗೆ ಎರಗ ಭೂಪಾಲ ರಟ್ಟರ ಅರಸನ ಉಲ್ಲೇಖವು ಇದೆ. ಈ ಶಾಸನದ ಕಾಲ ಸುಮಾರು ಕ್ರಿ.ಶ. ೧೦೮೮.

**ಶಾಸನ ನಂ. ೨**

ಖಾನಾಪೂರ ಗ್ರಾಮದ ಶ್ರೀ ಆಂಜನೇಯ ಸ್ವಾಮಿಯ ಮಂದಿರದ ಆವರಣ ಗೋಡೆಯ ಮೇಲೆ ಈ ಶಾಸನ ಕಲ್ಲನ್ನು ಕ್ರೋಢೀಕರಿಸಲಾಗಿದೆ. ಇದು ಕನ್ನಡ ಲಿಪಿ ಹಾಗೂ ಕನ್ನಡ ಭಾಷೆಯಿಂದ ಕೂಡಿರುವ ಹದಿನಾರು ಸಾಲುಗಳ ಶಾಸನವಾಗಿರುವದು.

ಸ್ವಸ್ತಿ ಸಮಸ್ತಭುವನಾಶ್ರಯಂ ಶ್ರೀ ಪೃಥ್ವಿ ವಲ್ಲಭೆ :

ಕ್ರಿ.ಶ. ೧೦೦೮ ರಿಂದ ಕ್ರಿ.ಶ. ೧೦೧೪ರ ವರೆಗೆ ಆಡಳಿತ ಮಾಡಿದ ಕಲ್ಯಾಣಿ ಚಾಲುಕ್ಯ ಸಾಮ್ರಾಟ ತ್ರಿಭುವನಮಲ್ಲ (೫ನೇ ವಿಕ್ರಮಾದಿತ್ಯ)ರ ಕಾಲದ ಶಾಸನವಾಗಿದೆ.

ತ್ರಿಭುವನಮಲ್ಲಿದೇವರ ಸಾಮಂತ ಕೂಹುಂಡಿ ಮಂಡಲದ ನೂಲೆಗುಪಣದ ಅಧಿಪತಿ ರಟ್ಟರಸ ಎರಡನೆಯ ಕನ್ನ ಒಂದು ಜೀನಾಲಯವನ್ನು ಕಟ್ಟಿಸಿರುವ ಉಲ್ಲೇಖವಿದೆ. ಶ್ರಿ ಪದ್ಮನಂದಿಮುನಿ ಅವರ ಮೂಲ ಸಂಘ, ದೇಶಿಯಗಣ ಮತ್ತು ಇದೇ ಗಣದ ಶ್ರೀಧರ ದೇವಮುನಿಯ ಉಲ್ಲೇಖವಿರುವದು. ಇವರಿಗೆ ಕನ್ನರಸರು ಭೂಮಿ ದಾನ ನೀಡಿರುವ ಸಂಗತಿಯಿದೆ.

ಈ ಶಾಸನವು ಜಿನಸ್ತುತಿಯಿಂದ ಆರಂಭವಾಗುತ್ತದೆ. ಹಾಗೂ 'ಸ್ಯಾದ್ವಾದ್' ಸಿದ್ಧಾಂತವನ್ನು ಪ್ರತಿಪಾದಿಸುತ್ತದೆ. ಜೈನರ ೧೩ ಗಣಗಳಲ್ಲಿಯ ಮುಖ್ಯಗಣವಾದ ದೇಶಿಯಗಣದ ಮುನಿಗಳ ವಿಷಯ ಪ್ರತಿನಿಧಿಸುವದರ ಜೊತೆಗೆ ಅವರ ಏಳು ಮುಖ್ಯ ಸಂಘಗಳಲ್ಲಿಯ ಮೂಲ ಸಂಘದ ವಿಷಯವನ್ನು ತಿಳಿಸುವದು.

**ಶಾಸನ ನಂ. ೩**

ಖಾನಾಪೂರ ಗ್ರಾಮದ ಶ್ರೀ ಆಂಜನೇಯ ಸ್ವಾಮಿಯ ಮಂದಿರದ ಆವರಣ ಗೋಡೆಯ ಮೇಲೆ ಈ ಶಾಸನವನ್ನು ಕೂಡ್ರಿಸಲಾಗಿದೆ. ಕನ್ನಡ ಲಿಪಿ, ಕನ್ನಡ ಭಾಷೆಯನ್ನು ಬಳಸಿರುವ ಶಾಸನ ೨೪ ಸಾಲುಗಳನ್ನು ಹೊಂದಿರುವುದು.

ಕಲ್ಯಾಣ ಚಾಲುಕ್ಯ ಸಾಮ್ರಾಟ ಒಂದನೇಯ ಸೋಮೇಶ್ವರ (ಕ್ರಿ.ಶ. ೧೦೪೩ ರಿಂದ ಕ್ರಿ.ಶ. ೧೧೬೮)ನ ವರ್ಣನೆಯಿಂದ ಶಾಸನಾರಂಭವಾಗುವುದು. ಈತನ ಸಾಮಂತ ಕೂಹೂಂಡಿ ಮಂಡಲಾಧಿಪತಿ ರಟ್ಟ ಕುಲಭೂಷಣ ಅಂಕದೇವರಸರ ಆಡಳಿತ ಅವಧಿಯ ಈತನ ಮಹಾಪ್ರಧಾನ ವರ್ಗಡೆ ಬಮ್ಮಣನು ಕಟ್ಟಿಸಿದ ಬಸದಿಗೆ ಇಲ್ಲಿಯ ಮಹಾಪ್ರಧಾನರು ಮೂರ್ತಿಯನ್ನು ಪ್ರತಿಷ್ಠಾಪಿಸಿ ಹಾಗೂ ಜಿನಾಲಯಗಳ ಮೂರ್ತಿಗಳು ಭಿನ್ನವಾದರೆ, ಅವುಗಳ ಜೀರ್ಣೋದ್ಧಾರಕ್ಕಾಗಿ ಭೂಮಿಯನ್ನು ದಾನ ಮಾಡಿದ ವಿಷಯವಿದೆ. ಮೂಲಸಂಘದ ಪ್ರಸ್ತಕ ಗಚ್ಛದ ಮುನಿಗಳಿಗೆ ೪೫೦ ಕಮ್ಮ ಭೂಮಿಯನ್ನು ಕಲು ಹಳ್ಳದಿಂದ ಪಶ್ಚಿಮ ಭಾಗದಲ್ಲಿದೆ. ಈ ದಾನ ಕ್ರಿ.ಶ. ೧೧೩೦ ರಲ್ಲಿ ಕೊಡಲಾಗಿದೆ ಎಂಬ ಉಲ್ಲೇಖವಿದೆ. ಇದರ ಜೊತೆಗೆ ಗದ್ಯಾಣ ೧ ಪಣಗಳ ಮಾಹಿತಿ ಇದೆ.

**ಶಾಸನ ನಂ. ೪**

ಖಾನಾಪೂರ ಗ್ರಾಮದ ಜೀರ್ಣೋದ್ಧಾರಗೊಂಡಿರುವ ಬಸದಿಯ ಆವರಣದಲ್ಲಿಯ

ಭಗ್ನಗೊಂಡ ಬಾಹುಬಲಿ ಮೂರ್ತಿಯ ಹಿಂಭಾಗದಲ್ಲಿರುವ ಶಾಸನಕ್ಕೆ ಕನ್ನಡ ಲಿಪಿ ಹಾಗೂ ಕನ್ನಡ ಭಾಷೆಯನ್ನು ಉಪಯೋಗಿಸಲಾಗಿದೆ. ಇದು ೧೯ ಸಾಲುಗಳನ್ನು ಹೊಂದಿದೆ. ಜಿನಸ್ತುತಿಯಿಂದ ಆರಂಭಗೊಳ್ಳುವ ಶಾಸನ ಕಲ್ಯಾಣ ಚಾಲುಕ್ಯ ಸಾಮ್ರಾಟ ಜಗದೇಕಮಲ್ಲರು ಆಡಳಿತ ಮಾಡುವ ಕಾಲ್ಕಕೆ ಈತನ ಶ್ರೀ ಮನ್ಮಮಹಾಮಂಡಳೇಶ್ವರರಾದ ಕತ್ತಮ ದೇವರಸರು (ಮೂರನೆಯ ಕಾರ್ಯವೀರ್ಯ) ಪೊನ್ನಗವೃಕ್ಷ ಹಾಗೂ ಮೂಲಗಣದ ಶ್ರೀಕನಕಸ್ವಾಮಿಗೆ ಭೂಮಿಯನ್ನು ದಾನ ಕೊಟ್ಟಿರುವ ವಿಷಯ ಉಲ್ಲೇಖಿಸಲಾಗಿದೆ. ಆರ್ಯಮದನ ಅಲ್ಗೋಡದ ಸಮತಿಯಣ್ಣ ನಿರ್ಮಿಸಿದ ಜಿನಾಲಯದ ವಿಷಯವು ಸ್ಪಷ್ಟವಾಗಿರುವದು. ರಟ್ಟರಸ ಸಿಂಧೂರ (ಆನೆ) ಸುವರ್ಣ ಗರುಡ ಲಾಂಛನವನ್ನು ಹೊಂದಿರುವ ಲತ್ತನೂರು ಪುರಾಧೀಶ್ವರ ಎನ್ನುವ ಸಂಗತಿ ಸಾಕ್ಷಿಯಾಗಿದೆ. ಈ ದಾನ ಶಾಸನವು ಜಗದೇಕ ಮಲ್ಲನು ಆಡಳಿತಕ್ಕೆ ಬಂದು ಸ್ವಲ್ಪ ಅವಧಿಯಲ್ಲಿಯೇ ಬರೆಯಿಸಲಾಗಿದೆ. ಈತನು ಕ್ರಿ.ಶ. ೧೧೩೯ ರಿಂದ ೧೧೫೦ರ ವರೆಗೆ ಆಡಳಿತ ಮಾಡಿರುವ ಸಂಗತಿಯಾಗಿದೆ. ಕ್ರಿ.ಶ. ೧೧೪೩ ರಿಂದ ೧೧೬೫ರ ವರೆಗೆ ರಟ್ಟರಸ ಮೂರನೆಯ ಕಾರ್ತವೀರ್ಯನು ಕಳಚೂರಿ ಸೋಮಿದೇವನ ಸಾಂತನಾಗಿದ್ದಾನೆಂದು ಇತರ ಮೂಲಗಳಿಂದ ತಿಳಿಸಬಹುದಾಗಿದೆ.

**ಶಾಸನ ನಂ. ೫**

ಖಾನಾಪೂರ ಗ್ರಾಮದ ಶ್ರೀ ಆಂಜನೇಯ ಸ್ವಾಮಿಯ ಮಂದಿರದ ಆವರಣದ ಗೋಡೆಯಲ್ಲಿ ಈ ಶಾಸನವನ್ನು ಕೂಡ್ರಿಸಲಾಗಿದೆ. ಹದಿನಾರು ಸಾಲುಗಳ ಈ ಶಾಸನ ಕನ್ನಡ ಲಿಪಿ ಹಾಗೂ ಕನ್ನಡ ಭಾಷೆಯನ್ನು ಹೊಂದಿದೆ.

ಈ ಶಾಸನವು ಸತ್ಯಾಶ್ರಯ ಕುಲತಿಲಕ ಕಲ್ಯಾಣ ಚಾಲುಕ್ಯ ಒಂದನೆಯ ಸೋಮೇಶ್ವರ ಸಾಮ್ರಾಜ್ಯವನ್ನು ಆಳುತ್ತಿರುವಾಗ ಈತನ ಸಾಮಂತ ರಟ್ಟರಸ ಅಂಕರಸನ ಕುಹೊಂಡಿ ಮಂಡಲಾಧಿಪತಿಯಾಗಿದ್ದು ಆತನ ಪೆರ್ಗಡೆ ಚಾವುಂಡನ ವಿಷಯ ಹಾಗೂ ಶ್ರೀಧರದೇವ ಮುನಿ ಹಾಗೂ ಅವರ ಶಿಷ್ಯ ಮಾಘನಂದಿ ಮುನಿಯ ಹೆಸರನ್ನು ಜೊತೆಗೆ ಮೂಲಸಂಘ ದೇಶಿಯ ಗಣ ಪುಸ್ತಕ ಗುಚ್ಛದ ವಿಷಯಗಳು ಪ್ರಸ್ತಾಪವಾಗಿದೆ. ಈ ಶಾಸನ ಕ್ರಿ.ಶ. ೧೦೪೩ ರಿಂದ ಕ್ರಿ.ಶ. ೧೦೪೮ರ ಕಾಲದ್ದಾಗಿರುವ ಸಾಧ್ಯತೆ ಇರುವದು.

**ಶಾಸನ ನಂ. ೬**

ಖಾನಾಪೂರ ಗ್ರಾಮದ ಶ್ರೀ ಆಂಜನೇಯ ಸ್ವಾಮಿಯ ದೀಪಸ್ತಂಭದ ಹತ್ತಿರ ಇರಿಸಲಾಗಿದೆ. ಈ ಶಾಸನದ ಮೇಲ್ಭಾಗ ತುಂಡಾಗಿದ್ದು ಕೇವಲ ಶಾಪಾಶಯ ಹೊಂದಿರುವ ವಿಷಯ ಇದೆ. ಬಸದಿಗಾಗಿ ನೀಡಿದ ದಾನವನ್ನು ಯಾರಾದರೂ ಹಾಳು ಮಾಡಿದರೆ ಮತ್ತು ಅಪಹರಿಸಿದರೆ ವಾರಣಾಸಿ ಹಾಗೂ ಗೋದಾವರಿ ನದಿಯಲ್ಲಿ ಸಾವಿರ ಆಕಳುಗಳನ್ನು ಕೊಂದ ಪಾಪವು ಬರುತ್ತದೆ ಎಂದು ಹೇಳಲಾಗಿದೆ.

**ಶಾಸನ ನಂ. ೭**

ಖಾನಾಪೂರ ಗ್ರಾಮದ ಶ್ರೀ ಆಂಜನೇಯ ಸ್ವಾಮಿ ಮಂದಿರದ ಹಿಂಭಾಗದ ಹೊಲದಲ್ಲಿ ತನ್ನ ಕ್ಷೇತ್ರ ಕಾರ್ಯದಲ್ಲಿ ಪತ್ತೆ ಮಾಡಿದ ಶಾಸನ ಕನ್ನಡ ಲಿಪಿ ಹಾಗೂ ಕನ್ನಡ ಭಾಷೆಯನ್ನು ಹೊಂದಿದೆ. ಹದಿನಾರು ಸಾಲಿನ ಶಾಸನ ಸತ್ಯಾಶ್ರಯ ಕುಲತಿಲಕ ಚಾಲುಕ್ಯಾಭರಣ

ಶ್ರೀ ಮದಾಹವಮಲ್ಲನ (ಒಂದನೇಯ ಸೋಮೇಶ್ವರ ಕ್ರಿ.ಶ.ಸ ೧೦೪೩ ರಿಂದ ೧೦೬೮) ವರ್ಣನೆಯಿಂದ ಶಾಸನ ಆರಂಭವಾಗುತ್ತದೆ. ಈತನ ಮಹಾಮಂಡಳೇಶ್ವರ ಪೆರ್ಮಾಡಿ ಮಾದಿರಸ ಕೂಹುಂಡಿ ಮೂರು ಸಾವಿರ ನಾಡನ್ನು ಆಳುತ್ತಿದ್ದನು ಎಂಬುದರ ವಿಷಯ ಮೈಲಾಳದೇವಿ ಒಂದನೇಯ ಸೋಮೇಶ್ವರನ ಹಿರಿಯ ರಾಣಿಯ ಉಲ್ಲೇಖವಿದೆ. ಇದು ದಾನ ಶಾಸನವಾಗಿದ್ದು ಶಕವರುಷ ೯೭೫ ಜಯಸಂವತ್ಸರ ಮಾಘಶುದ್ಧ ಪಂಚಮಿ ಉತ್ತರಾಯಣ ಆದಿವಾರದಂದು ದಾನವನ್ನು ಕೊಡಲಾಗಿದೆ. ಆದರೆ ಪ್ರತಿಗ್ರತಿಯ ಹೆಸರು ಸ್ಪಷ್ಟವಾಗಿಲ್ಲ. ಶಾಸನದ ಕಡೆಯ ಆರು ಸಾಲುಗಳು ಶಾಪಾಶಯ ತಿಳಿಸುವ ಸಾಲುಗಳಾಗಿವೆ.[೯೧]

**ಪರ್ಶಿಯನ್ ಶಾಸನಗಳು**

**ಶಾಸನ ನಂ. ೧ : [EIAPS – 1972 /pp 59-60]**

ಪರ್ಶಿಯನ್ ಭಾಷೆಯಲ್ಲಿರುವ ಈ ಶಾಸನ ಮೆಟ್ಟಿಲುಗಳುಳ್ಳ ಹಳೆಯ ಭಾವಿಯ ಅವಶೇಷದಲ್ಲಿ ದೊರೆತಿದೆ. ಇದು ಕ್ರಿ.ಶ. ೧೫೪೪ರ ಅವಧಿಯದ್ದು ಇದೊಂದು ಇದರಲ್ಲಿ ಹುಕ್ಕೇರಿ ಪಟ್ಟಣದ ಜನರು ಮತ್ತು ಆ ಗ್ರಾಮದ ಅಧಿಕಾರಿಗಳು ಬರವಣಿಗೆ ಮೂಲಕ ತಿಳಿಸುವುದೇನೆಂದರೆ. ಜೈಸಿರಿ ಭಾವಿ ಸಮೀಪದಲ್ಲಿರುವ ಒಂದು ಚವಾರ ಭೂಮಿಯನ್ನು ಈ ಭಾವಿ (ಕಾರಂಜಿ)ಯ ಅಭಿವೃದ್ಧಿಗಾಗಿ, ದೇವರಿಗಾಗಿ ಸಾರ್ವಜನಿಕರ ಉಪಯೋಗಕ್ಕಾಗಿ, ಮನಸೂರಖಾನ ಕಟ್ಟಿಸಿದ ಅತಿಥಿಗೃಹದ ನಿರ್ವಹಣೆಗಾಗಿ ದತ್ತಿ ನೀಡಲಾಗಿದೆ. ಈ ಭೂಮಿಯ ಉತ್ಪನ್ನದ ೩/೪ ಭಾಗವನ್ನು ಅತಿಥಿಗೃಹದ ನಿರ್ವಹಣೆಗಾಗಿ ಬಳಸಬೇಕೆಂದು ಸೂಚನೆ ನೀಡಲಾಗಿದೆ. ಈ ಒಡೆತನವನ್ನು ಕೃಷಿಯ ಉದ್ದೇಶದಿಂದ ಹಸನನ ಮಗ ಮೀರನಿಗೆ ನೀಡಲಾಗಿದೆ ಎಂಬ ದಾಖಲೆಯಿದೆ.[೯೨]

ಈ ಸಭೆಯಲ್ಲಿ ಸರ್ವರು ಮಾಡಿದ ಪ್ರಮಾಣವೇನೆಂದರೆ ಈ ನಿರ್ಣಯವನ್ನು ಮುಸಲ್ಮಾನ ಮುರಿದರೆ ಅವನು ಕ್ರೈಸ್ತನಾಗಿ ಪರಿವರ್ತನೆ ಹೊಂದಿದ ಪಾಪಕ್ಕೆ ಗುರಿಯಾದನೆಂದು ಭಾವಿಸಬೇಕು. ಒಂದು ವೇಳೆರ ಹಿಂದೂ ಇದನ್ನು ರದ್ದುಪಡಿಸಿದರೆ ಆತ ಗೋವನ್ನು ಕೊಂದು ಅದನ್ನು ಕಾಶಿಯಲ್ಲಿ ತಿಂದು ಪಾಪ ಮಾಡಿದನೆಂದು ಪರಿಗಣಿಸಬೇಕು.

ಈ ನಿರ್ಣಯವನ್ನು ಕೈಗೊಂಡ ಸಭೆಯಲ್ಲಿ ಹಾಜರಿದ್ದವರ ಹೆಸರುಗಳು ಈ ಕೆಳಗಿನಂತಿವೆ.

ಷೇಕ್ ಮಹಮ್ಮದ್ ಖಾತಿಬ್‌ನ ಮಗ ಖಾಜಿ ಮಲ್ಲಿಕ್

ಸಯ್ಯಿದ್ ಮಖಾದುಮ್‌ನ ಮಗ ಸಯ್ಯದ್ ಹಮೀದ್

ಮುಲ್ಲಾ ಮಹಮ್ಮದ್‌ನ ಮಗ ಮುಲ್ಲಾ ಹುಸೇನ್

ನರಸರುಲ್ಲಾನ ಮಗ ಹಸನ್

ಷೇಕ್ ಹುಸೇನ್

ತಾಜುದ್ಧೀನ್‌ನ ಮಗ ಸಲಾರ ಜಿನ್

ತನಿಗೌಂಡನ ಅಳಿಯ ಯಲಗೌಂಡ

ಕಿಸನ್‌ಗೌಂಡನ ಮಗ ಲಕಮೋಜಿ

ಲೋಕೋನ ಮಗ ಕೋಕು

ಬಷೀರ್ ನಾಯಕನ ಮಗ ಅಲ್ಲಾವುದ್ದೀನ್ ನಾಯಕ

ಕಲಗೌಂಡಾ ಪಟೇಲನ ಮಕ್ಕಳಾದ ನಾಗೆ ನಾಯಕ, ಲಿಂಗ ನಾಯಕ, ನರಸನಾಯಕ

ಕಮ್‌ಸೇಠಿಯ ಮಗ ಹಾನಸೇಠಿ

ಹಿರ್‌ಬೂ ಸೇಠಿಯ ಮಗ ವಿನಾಯಕ ಸೇಠಿ

ಕೊಂಕಲ್ ಡಿಯೋ ಸೇಠಿ

ಸರಿಲ್ ಸೇಠಿಯ ಮಗ ಜೊಕ್‌ಲಾನಿ

ಗಾಣಿಗರ ಮುಖ್ಯಸ್ಥರು

ಸಿರಾಮ್ ಕುಲಕರ್ಣಿಯ ಮಗ ಅಬಾಜಿ

ಗಜಾರ (ಮಾಲಿಗಳ ಮುಖ್ಯಸ್ಥ)ನ ಮಗ ಅಬ್ದುಲ್ಲ

ನಿಂಚಣ್ಣ (ಕಮ್ಮಾರರ ಮುಖ್ಯಸ್ಥ)ನ ಮಗ ಈರಣ್ಣ

ದರ್ಜ್ಯಾನ (ದರ್ಜಿ) ಲಿಂಗಣ್ಣ

ಹಣುಮಂತನ (ಬಡಿಗಿಗಳ ಮುಖ್ಯಸ್ಥ) ಮಗ ಮಲವಾರ

ಶಿವನ (ಕುಂಬಾರರ ಮುಖ್ಯಸ್ಥ) ಲಮಾ)

ಸಿನ್ನಾಭೆಟ್‌ನ ಮಗ ಕಮಲದೇವ ಭೆಟ್

ಶಂಕರ ಭಟ್ ಜೋಷಿ (ಜೋತಿಷಿ) ಮಗ ಹೇಮಭೆಮ್

ಅಮ್ಮೃಂತಾಂಭರಪತಿ (ಪೂಜಾರಿ)

ಐತಮ್ಮ (ಕ್ಷೌರಿಕರ ಮುಖ್ಯಸ್ಥ) ಮಗ ಶಂಕರ

ದೋಬನ (ಅರಸನ ಮುಖ್ಯಸ್ಥ) ದೆರಿಯ್ಯಾ

ಕಿಚಿಯ ಮಗ ಕವ್

ಲಖು ಖಜೂನ್ (ಮನೆ ಕೆಲಸ ಮಾಡುವವರ ಮುಖ್ಯಸ್ಥ) ಮಗ

ಲಖುಹೀನ ಇವರ ಮೊಮ್ಮಗ ಇಳಾ ಹೋನ

ಇವನ ಮರಿ ಮೊಮ್ಮಗ ಜಬು

ಗೋಮಾನ (ಮಿಠಾಯಿ ಮಾರುವವ) ಮಗ ವಿಯಾನ್

**ಶಾಸನ ನಂ. ೨ : (೨೦) [ARSIE 1942-43]**

ಪರ್ಶಿಯನ್ ಭಾಷೆಯಲ್ಲಿರುವ ಶಾಸನ ಮುನಸಿಪಲ್ ನ್ಯಾಯಾಲಯದ ಆವರಣದಲ್ಲಿ ಬಿಡಿಯಾಗಿ ಬಿದ್ದಿದೆ. ಅದರ ಮೇಲೆ ಆ ಹಿ ೯೬೯ (೧೫೬೧-೬೨ ಕ್ರಿ.ಶ.) ಎಂಬ ದಿನಾಂಕ ಮತ್ತು ಆಲಿ ೧ (ಆದಿಲ್‌ಶಾಹಿ ದೊರೆ) ಎಂಬ ಹೆಸರಿನ ಉಲ್ಲೇಖವಿದೆ. ಸದರಿ

ವರ್ಷದಲ್ಲಿ ಯಾವುದೋ ಬೃಹತ್ತ ಕಟ್ಟಡ (ಹೆಸರನ್ನು ಉಲ್ಲೇಖಿಸಿಲ್ಲ) ನಿರ್ಮಾಣದ ಕೆಲಸ ಮುಗಿದ ಬಗ್ಗೆ ದಾಖಲಿಸಿದೆ.

**ಶಾಸನ ನಂ. ೩ : (೨೧) [ARSIE 1942-43]**

ಈ ಶಾಸನವನ್ನು ಮನ್‌ಸಾಹೀಬ್ ದರ್ಗಾದ ಗೋಡೆಗೆ ಅಳವಡಿಸಲಾಗಿದೆ. ಆ.ಹಿ. ೯೭೫ (೧೫೬೭-೬೮ ಕ್ರಿ.ಶ.) ರ ಅವಧಿಯಾಗಿದ್ದು, ಧರ್ಮಕ್ಕೆ ಸಂಬಂಧಿಸಿದ ಪತ್ರ (ವಿವರ) ವನ್ನು ಒಳಗೊಂಡಿದೆ.[೩]

**ಶಾಸನ ನಂ. ೪ : (೨೨) [ARSIE 1942-43]**

ಈ ಶಾಸನವು ಕಾಲಿ ಮಸೀದಿಯಲ್ಲಿ ದೊರೆತಿದೆ. ಆ.ಹಿ. ೯೯೨ ರಲ್ಲಿ (೧೫೮೨-೮೩ ಕ್ರಿ.ಶ.) ನಾಶ ಮಾಡಲಾದ ದೇವಸ್ಥಾನದ ಜಾಗದಲ್ಲಿ ಮಸೀದಿಗೆ ಐನ್ ಉಲ್ ಮುಲಕಿನ ಆಧೀನದಲ್ಲಿದ್ದು ಮನ್ಸೂರ ಖಾನನು ಅಡಿಪಾಯ ಹಾಕಿದನೆಂಬ ಉಲ್ಲೇಖವಿದೆ.[೪] ಈವರೆಗೂ ಉಲ್ಲೇಖಿಸಿ ವಿವರಿಸಿದ ಶಾಸನಗಳು ಈ ಪ್ರದೇಶದಲ್ಲಿಯೇ ದೊರೆತಿವೆ. ಅವುಗಳಲ್ಲಿ ಎಲ್ಲವು ಬೇರೆ ಬೇರೆ ಪತ್ರಿಕೆಗಲಲ್ಲಿ ಪ್ರಕಟವಾಗಿವೆ. ಅರ್ಜುನವಾಡ ಶಾಸನವು ಕರ್ನಾಟಕ ಇತಿಹಾಸ ಅಧ್ಯಯನದಲ್ಲಿ ಅತೀ ಪ್ರಮುಖವಾದ ಸ್ಥಾನವನ್ನು ಪಡೆದ ಶಾಸನವಾಗಿದೆ ಎಂದು ಅಭಿಪ್ರಾಯಿಸಬಹುದು.

**ಅಡಿಟಿಪ್ಪಣೆಗಳು**

೧. ಬೆಳಗಾಂ ಡಿಸ್ಟ್ರಿಕ್ಟ ಗೆಜಿಟಿಯರ್, ಪುಟ.೫೪
೨. ಅದೇ ಪುಟ.೫೪
೩. ಕರ್ನಾಟಕ ರಾಜ್ಯ ಗೆಜಿಟಿಯರ್, ೧೯೮೬, ಭಾಗ-೩, ಪುಟ.೬೨೭
೪. ಅದೇ ಪುಟ.೬೨೭
೫. ಅದೇ ಪುಟ.೬೨೮
೬. ಹುಕ್ಕೇರಿ ತಾಲೂಕು ದರ್ಶನ, ಪುಟ.೩
೭. ಅದೇ ಪುಟ.
೮. ಆನುಯೆಲ್ ರಿಪೋರ್ಟ್ ಆನ್ ಸೌಥ್ ಇಂಡಿಯನ್ ಎಫಿಗ್ರಪಿ ಪುಟ.೨೬೨
೯. ಹುಕ್ಕೇರಿ ತಾಲೂಕು ದರ್ಶನ, ಪುಟ.೮-೯.
೧೦. ಎ.ಆರ್.ಎಸ್.ಆಯ್.ಇ. (೧೯೪೨-೪೩), ಪುಟ.೨೯೧
೧೧. ಘಟಪ್ರಭ ಸಿರಿ, ಪುಟ.೨೪೬
೧೨. ಅದೇ, ಪುಟ.೨೪೩
೧೩. ಅದೇ, ಪುಟ.೨೪೫-೪೬
೧೪. ಬೆಳಗಾವಿ ಜಿಲ್ಲಾ ಮಾರ್ಗದರ್ಶಿ, ಪುಟ.೨೩೧
೧೫. ಕರ್ನಾಟಕ ಇನ್‌ಸ್ಕ್ರಿಪಶನ್ಸ್, ಸಂಪುಟ.೫, ಪುಟ.೧೭-೧೮
೧೬. ಹುಕ್ಕೇರಿ ತಾಲೂಕು ದರ್ಶನ, ಪು.೮-೯
೧೭. ಅದೇ ಪುಟ.೮
೧೮. ಆನುಯಲ್ ರಿಪೋರ್ಟ್ ಆನ್ ಸೌಥ್ ಇಂಡಿಯನ್ ಎಫಿಗ್ರಫಿ, ಪುಟ.೨೬೨.
೧೯. ಹುಕ್ಕೇರಿ ತಾಲೂಕು ದರ್ಶನ, ಪುಟ.೮-೯.
೨೦. ಎ.ಆರ್.ಎಸ್.ಆಯ್.ಇ., ಪುಟ.೨೯೧

೨೧. ಅದೇ ಪುಟ.೨೯೨

೨೨. ಎಫಿಗ್ರಾಫಿಯ ಇಂಡಿಕಾ, ಸಂಪುಟ-೨೧, ಪುಟ.೯

೨೩. ಕರ್ನಾಟಕ ರಾಜ್ಯ ಗೆಜೆಟಿಯರ್, ಪುಟ.೧೦೧.

೨೪. ಅದೇ ಪುಟ.೬೨೮

೨೫. ಅದೇ ಪುಟ.೬೨೮

೨೬. ಅದೇ ಪುಟ.೬೨೮

೨೭. ಕನ್ನಡ ವಿಷಯ ವಿಶ್ವಕೋಶ, ಪುಟ.೧೪೬೦

೨೮. ಹುಕ್ಕೇರಿ ತಾಲೂಕು ದರ್ಶನ, ಬೆಂಗಳೂರು, ೧೯೮೭, ಪುಟ.೧೪.

೨೯. ಅದೇ ಪುಟ.೧೫.

೩೦. ಕನ್ನಡ ಶಾಸನ ಸಂಪದ, ಪುಟ.೬

೩೧. ತರ್ದವಾಡಿ ನಾಡು, ಪುಟ.

೩೨. ಹಳಕಟ್ಟಿನುಡಿ, ಪುರುಷ (ಪ್ರಥಮ ವಿಶ್ವಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ ೧೦, ಸಂ.ಶಾಂತರಸ, ಪ್ರಧಾನ ನಿರ್ದೇಶಕರು.

೩೩. ಘಟಪ್ರಭೆ ಸಿರಿ, ೨೦೧೧, ಪುಟ.೩೫

೩೪. ಅದೇ, ಪುಟ.೩೫

೩೫. ಅದೇ ಪುಟ.೩೬

೩೬. ಅದೇ ಪುಟ.೩೬

೩೭. ಅದೇ ಪುಟ.೩೭

೩೮. ಅದೇ ಪುಟ.೩೮

೩೯. ಅದೇ ಪುಟ.೩೮-೪೦

೪೦. ಅದೇ ಪುಟ.೧೭-೨೫

೪೧. ಪರ್ಶಿಯನ್ ಆರ್‍ಯಾಬಿಕ್ ಅಂಡ್ ಉರ್ದು ಇನ್‌ಸ್ಕ್ರಿಪಶನ್ಸ್ ಆಫ್ ಕರ್ನಾಟಕ, ಪುಟ.೧೫

೪೨. ಅದೇ ಪುಟ.೧೬

೪೩. ಅದೇ ಪುಟ.೧೬

# ಅಧ್ಯಾಯ ಮೂರು

# ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು

ಸಾಮಾಜಿಕ ವ್ಯವಸ್ಥೆ ಎಂದರೆ ಸಮಾಜದ ಅನೇಕ ಅಂಶಗಳನ್ನು ಒಳಗೊಂಡ ಅತ್ಯಂತ ವಿಶಾಲ ವ್ಯಾಪ್ತಿಯುಳ್ಳ ಅಧ್ಯಯನವಾಗಿದೆ. ಪರಸ್ಪರ ಸಂಬಂಧವುಳ್ಳ ಜನತೆಯ ವ್ಯವಸ್ಥಿತ ಸಮೂಹವನ್ನು ಸಮಾಜವೆನ್ನಬಹುದು. ಸಮಾಜವೆಂದ ಬಳಿಕ ಅದರ ವರ್ಣ, ವರ್ಗ, ಸ್ತ್ರೀಯರ ಸ್ಥಾನಮಾನ, ವೇಷ, ಭೂಷಣ, ಅಲಂಕಾರ, ಆತ್ಮಬಲಿ ಪ್ರಕಾರಗಳು ಇತ್ಯಾದಿ ಅಂಶಗಳಿದ್ದು ಅವು ಆಯಾ ಸಾಮಾಜಿಕ ಒಪ್ಪಿತ ಮೌಲ್ಯಕ್ಕೆ ಬದ್ಧವಾಗಿರುತ್ತವೆ.[೧] ಅಂದರೆ ಅನುಕೂಲ ಮತ್ತು ಭದ್ರತೆಗೆ ಒಂದು ಬಗೆಯ ಒಪ್ಪಂದ ಏರ್ಪಡುತ್ತದೆ.

ಪ್ರಾಚೀನ ಮಧ್ಯಕಾಲೀನ ಹುಕ್ಕೇರಿ ಪ್ರದೇಶದ ಸಾಂಸ್ಕೃತಿಕ ಅಧ್ಯಯನ ವಿಷಯದ ಪ್ರಮುಖ ಭಾಗವಾದ ಸಾಮಾಜಿಕ ವ್ಯವಸ್ಥೆಯನ್ನು ತಿಳಿಯಲು ಈ ಪ್ರದೇಶದ ಶಾಸನಗಳು ದೇವಾಲಯಗಳು, ವೀರಗಲ್ಲುಗಳು ಮಹಾಸತಿಕಲ್ಲುಗಳು ನೆರವಾಗಿವೆ.

**ಜಾತಿ ಪದ್ಧತಿ (ವರ್ಗ-ವರ್ಣ ಜಾತಿ ವೃತ್ತಿ)**

ಜಾತಿ ಎನ್ನವುದು ಬೇರೆ ಬೇರೆ ಸಾಮಾಜಿಕ ಅಂತಸ್ತುಗಳನ್ನು ಸೂಚಿಸುವ ಪದ. ಇದೊಂದು ಕ್ರೂರ ಸಂಪ್ರದಾಯವಾಗಿದ್ದು, ನಿರ್ಜೀವ ಆಚರಣೆಗಳೊಂದಿಗೆ ಬೆಳೆದು ಬಂತು. ಜನರನ್ನು ಮೂಢಾಚಾರಗಳ ಬಲೆಯಲ್ಲಿ ಸಿಲುಕಿಸಿ ಗುಲಾಮರನ್ನಾಗಿ ಮಾಡುವ ವ್ಯವಸ್ಥೆಯೇ ಜಾತಿ ಪದ್ಧತಿ. ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ರಚನೆಯನ್ನು ಅಭ್ಯಸಿಸುವಾಗ ಜಾತಿ ಪದ್ಧತಿ ಪ್ರಬಲ ರಚನೆಯಾಗಿ ಕಂಡುಬರುತ್ತದೆ. ಪುರೋಹಿತಶಾಹಿಯು ಈ ವ್ಯವಸ್ಥೆಯ ಸ್ಥಾಪಕನಾಗಿ ಮತ್ತು ನಿರ್ದೇಶಕನಾಗಿ ಕಾರ್ಯ ನಿರ್ವಹಿಸಿತು. ಧರ್ಮವನ್ನು ಈ ವ್ಯವಸ್ಥೆಗೆ ಮಾಧ್ಯಮವನ್ನಾಗಿ ಬಳಸಿಕೊಳ್ಳಲಾಯಿತು. ರಾಜಪ್ರಭುತ್ವವು ತನ್ನ ಉದ್ದೇಶಗಳ ಈಡೇರಿಕೆಗಾಗಿ ಜಾತಿ ಆಯಾಮಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಿತು. ಮೇಲ್ವರ್ಗಗಳ ಒಲವನ್ನು ಗಳಿಸಲು ಅರಸರಿಗೆ ಜಾತಿ ಪದ್ಧತಿಯನ್ನು ಯಥಾಪ್ರಕಾರ ಮುಂದುವರೆಸಿಕೊಂಡು ಹೋಗುವುದು ಅನಿವಾರ್ಯವಾಗಿತ್ತು. ಈ ಉದ್ದೇಶಕ್ಕೆ ಪುರೋಹಿತಶಾಹಿಯ ಸಂಪೂರ್ಣ ಬೆಂಬಲವೂ ದೊರಕಿತು. ಈ ಕಾರಣಕ್ಕಾಗಿಯೇ ಜೈನ ಧರ್ಮ ಮತ್ತು ಬೌದ್ಧ ಧರ್ಮಗಳು ಆರಂಭಿಕ ಹಂತದಲ್ಲಿ ವೈದಿಕ ಧರ್ಮವನ್ನು ವಿರೋಧಿಸಿದವು. ಆದರೆ ಕ್ರಮೇಣ ಜೈನ ಮತ್ತು ಬೌದ್ಧಧರ್ಮಗಳು ತಮ್ಮಲ್ಲೇ ಜಾತಿ ನಿಯಮಗಳನ್ನು ಅಳವಡಿಸಿಕೊಂಡಿರುವುದು ಚರಿತ್ರೆಯಿಂದ ತಿಳಿದು ಬರುವ ಸತ್ಯ. ಭಕ್ತಿ ಪಂಥವು ವೈದಿಕ ಪರಂಪರೆಯ ಸಂಪ್ರದಾಯಗಳನ್ನು ವಿರೋಧಿಸಿ ಪುರೋಹಿತಶಾಹಿಯ ವರ್ಣ ವ್ಯವಸ್ಥೆಗೆ ತಾತ್ಕಾಲಿಕವಾದ ತಡೆಯನ್ನು ನಿರ್ಮಿಸಿತು. ಹನ್ನೆರಡನೆಯ ಶತಮಾನದಲ್ಲಿ ಆರಂಭಗೊಂಡ ವೀರಶೈವ ಆಂದೋಲನವು ವೈದಿಕ ಪ್ರಭುತ್ವವನ್ನು ಮತ್ತು ಜಾತಿ ವ್ಯವಸ್ಥೆಯ ಶ್ರೇಣೀಕರಣವನ್ನು ವಿರೋಧಿಸಿತು. ಆದರೆ ಇವು ಯಾವವೂ ಜಾತಿ ಪದ್ಧತಿಯನ್ನು ಶಾಶ್ವತವಾಗಿ ಹೋಗಲಾಡಿಸುವಲ್ಲಿ ಯಶಸ್ವಿಯಾಗಲಿಲ್ಲ.

ವೃತ್ತಿ ಆಧಾರದ ಮೇಲೆ ರೂಪಗೊಂಡಿದ್ದ ಸಮಾಜ ಕ್ರಮೇಣ ವರ್ಣ ವ್ಯವಸ್ಥೆಗೆ ಪರಿವರ್ತನೆಗೊಂಡು ನಂತರ ಜಾತಿ ವ್ಯವಸ್ಥೆಗೆ ಪರಿವರ್ತನೆಗೊಂಡಿರುವುದು ಈಗಾಗಲೇ ಸಾಕಷ್ಟು ಚರ್ಚೆಗೆ ಒಳಪಟ್ಟಿರುವಂತದ್ದು. ವರ್ಣ ವ್ಯವಸ್ಥೆಗಿಂತ ಮೊದಲು ಜಾತಿಗಳು ಹುಟ್ಟಿಕೊಂಡಿದ್ದವು ಎನ್ನುವ ವಾದವೂ ಇದೆ. ವರ್ಣ ಮತ್ತು ಜಾತಿ ಎನ್ನುವ ಪದಗಳ ಬಗ್ಗೆ ಎಷ್ಟೇ ವ್ಯಾಖ್ಯಾನಗಳು ಬಂದರೂ ಅವುಗಳ ಸಂದರ್ಭದಲ್ಲಿನ ಗೊಂದಲವಂತೂ ನಿವಾರಣೆಯಾಗಿಲ್ಲ. ಸಮಾನ ಧಾರ್ಮಿಕ ಆಚರಣೆಗಳುಳ್ಳ ಜಾತಿಗಳನ್ನು ಒಟ್ಟುಗೂಡಿಸಿ ಅನುಕ್ರಮವಾಗಿ ಶ್ರೇಣೀಕರಿಸುವುದು ವರ್ಣ ವ್ಯವಸ್ಥೆ. ಆದರೆ ಇದು ವಾಸ್ತವ ಸಾಮಾಜಿಕ ಚಿತ್ರಣವನ್ನು ನೀಡುವುದಿಲ್ಲ. ಜಾತಿ ವ್ಯವಸ್ಥೆಯಲ್ಲಿ ಬರುವ ಅನೇಕ ಜಾತಿಗಳು ಇದರಲ್ಲಿ ತಮ್ಮ ನೆಲೆಯನ್ನು ಕಳೆದುಕೊಂಡು ಬಿಡುತ್ತವೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ, ಬುಡಕಟ್ಟುಗಳು ಜಾತಿ ಪದವು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಅರ್ಥವನ್ನು ಕೊಡುತ್ತಿರುತ್ತವೆ. ಇದರಲ್ಲಿ ನೀತಿ, ನಿಯಮಗಳು ಮೊದಲೇ ರೂಪಗೊಂಡಿರುತ್ತವೆ. ವ್ಯಕ್ತಿಯ ಜೀವನದ ಪ್ರತಿಯೊಂದು ಹಂತವನ್ನೂ ಅದು ನಿರ್ಧರಿಸುತ್ತಿರುತ್ತದೆ. ಮಾನವ ಬದುಕಿದ್ದಾಗ ಮಾತ್ರವಲ್ಲದೆ ಸತ್ತ ಮೇಲೂ ಅವನಿರಬೇಕಾದ ಜಾಗವನ್ನು ಜಾತಿಯು ನಿರ್ಧರಿಸುತ್ತದೆ. ಈ ವ್ಯವಸ್ಥೆಯಲ್ಲಿ ಆದಿವಾಸಿ ಬುಡಕಟ್ಟುಗಳು ಹಾಗೂ ಅಲೆಮಾರಿಗಳು ಮನುಷ್ಯ ವರ್ಗಕ್ಕೆ ಸೇರಿದವರೇ ಅಲ್ಲ ಎನ್ನುವ ತೀರ್ಮಾನವಿದೆ. ಅವರು ಸವಲತ್ತುಗಳನ್ನು ಪಡೆಯುವುದಾಗಲಿ, ವೃತ್ತಿಗಳನ್ನು ಬದಲಾಯಿಸುವುದಾಗಲಿ, ವೃತ್ತಿಗಳನ್ನು ಬದಲಾಯಿಸುವದಾಗಲಿ ಸಾಧ್ಯವಿರಲಿಲ್ಲ. ಈ ವ್ಯವಸ್ಥೆಯಲ್ಲಿ ಮೇಲ್ವರ್ಗ ಮೇಲ್ವರ್ಗವಾಗಿಯೇ ಇತ್ತು ಹಾಗೂ ಕೆಳವರ್ಗ ಕೆಳವರ್ಗವಾಗಿಯೇ ಇತ್ತು. ಸಾಮಾಜಿಕ ಯಥಾಸ್ಥಿತಿಯನ್ನು ಕಾಯ್ದುಕೊಳ್ಳಲು ವೇದಗಳ ಮೂಲಕ ಕಾನೂನಿನ ಚೌಕಟ್ಟನ್ನು ನಿರ್ಮಿಸಲಾಯಿತು. ಇದಕ್ಕೆ ಮೂಲಕಾರಣವೆಂದರೆ ಬ್ರಾಹ್ಮಣ ಮತ್ತು ಕ್ಷತ್ರಿಯರು ಅಲ್ಪಸಂಖ್ಯಾತರಾಗಿರುವುದೇ ಆಗಿತ್ತು. ಬಹುಸಂಖ್ಯಾತರಾಗಿದ್ದ ವೈಶ್ಯ ಹಾಗೂ ಶೂದ್ರರನ್ನು ಹತೋಟಿಯಲ್ಲಿಡಲು ಈ ಚೌಕಟ್ಟು ಅನಿವಾರ್ಯವಾಗಿತ್ತು.

ಜಾತಿಗಳಲ್ಲೆಲ್ಲ ಬ್ರಾಹ್ಮಣ ಶ್ರೇಷ್ಠ ಎಂಬುದು ಸಾರ್ವತ್ರಿಕವಾಗಿ ಒಪ್ಪಿತವಾಗಿದ್ದಿತು. ಅಂದಿನ ಸಾಹಿತ್ಯ ಕೃತಿಗಳು ಮತ್ತು ಶಾಸನಗಳು ಈ ಕುರಿತು ಹೇರಳವಾದ ಮಾಹಿತಿಗಳನ್ನು ನೀಡುತ್ತವೆ. ಅವುಗಳಲ್ಲಿ ಹದಿನೆಂಟು ಜಾತಿಗಳ ಉಲ್ಲೇಖಗಳಿದ್ದು, ಮೊದಲನೆಯದು ಬ್ರಾಹ್ಮಣ ಕೊನೆಯದು ಅಂತ್ಯಜ ಅಥವಾ ಹೊಲೆಯ ಎನ್ನುವ ವಿವರಗಳಿವೆ. ಇದು ಅಂದಿನ ಶ್ರೇಣೀಕೃತ ಸಮಾಜ ವ್ಯವಸ್ಥೆಯ ಯಥಾವತ್ತಾದ ಚಿತ್ರಣವಾಗಿ ಕಂಡು ಬರುತ್ತದೆ. ಜಾತಿಗಳು ಹದಿನೆಂಟು ಎಂಬುದು ಒಂದು ಅಂಗೀಕೃತವಾದ ಮಾತಾಗಿದ್ದಿರಬಹುದೆಂದು ತೋರುತ್ತದೆ. ಏಕೆಂದರೆ ಜಾತಿಗಳು ಹದಿನೆಂಟಕ್ಕಿಂತ ಎಷ್ಟೋ ಹೆಚ್ಚಾಗಿದ್ದವು ಎಂಬುದು ಶಾಸನಗಳಿಂದ ಮತ್ತು ಸಾಹಿತ್ಯ ಕೃತಿಗಳಿಂದ ಗೊತ್ತಾಗುತ್ತದೆ. ವಚನಕಾರರು ಹದಿನೆಂಟು ಜಾತಿಗಳ ಪಟ್ಟಿಯನ್ನು ಕೊಟ್ಟಿದ್ದಾರೆ. ಸೊಡ್ಡಳ ಬಾಚರಸ ಎನ್ನುವವನು ಮನುಷ್ಯನ ದೇಹದ ಪ್ರತಿಯೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಕೊಟ್ಟಿದ್ದಾರೆ. ಸೊಡ್ಡಳ ಬಾಚರಸ ಎನ್ನುವವನು ಮನುಷ್ಯನ ದೇಹದ ಪ್ರತಿಯೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಸಮೀಕರಿಸಿ, ಹದೆನೆಂಟು ಜಾತಿಗಳ ಪಟ್ಟಿಯನ್ನು ಕೊಟ್ಟಿದ್ದಾನೆ. ಅವುಗಳೆಂದರೆ: ಬ್ರಾಹ್ಮಣ (ಶಿಖ), ಕ್ಷತ್ರಿಯ (ನಯನ), ಬಣಜಿಗ (ನಾಸಿಕ), ಒಕ್ಕಲಿಗ (ತುಟಿ), ಗೊಲ್ಲ (ಕರ್ಣ), ಕುಂಬಾರ (ಕೊರಳು), ಪಂಚಾಳ (ಬಾಹು), ಉಪ್ಪಾರ (ಅಂಗೈ), ನಾಯಿಂದ (ಉಗುರು), ಡೊಂಬ (ಒಡಲು), ಅಗಸ (ಬೆನ್ನು), ಜೇಡ ( ), ಕಬ್ಬಿಲ (ಪೃಷ್ಠ), ಹೊಲೆಯ (ಒಳದೊಡೆ), ಈಳಿಗ (ಮಣಿಕಾಲು), ಸಮಗಾರ (ಕಣಗಾಲು), ಮಚ್ಚಿಗ (ಮೇಗಾಲು) ಮತ್ತು ಶುದ್ಧ ಮಾದಿಗ (ಅಂಗಾಲು), ಅಂಬಿಗರ ಚೌಡಯ್ಯನು ಇದೇ

ರೀತಿ ಮನುಷ್ಯನ ದೇಹದ ಪ್ರತಿಯೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಸಮೀಕರಿಸಿ ಹದಿನೆಂಟು ಜಾತಿಗಳ ಉಲ್ಲೇಖ ಮಾಡಿದ್ದಾನೆ. ಈ ಉಲ್ಲೇಖಗಳು ಮನುಷ್ಯನ ದೇಹವನ್ನು ಆಧಾರವನ್ನಾಗಿಟ್ಟುಕೊಂಡು ಸಮಾಜದ ವಿಭಿನ್ನ ಸ್ತರಗಳನ್ನು ವಿವರಿಸುವ ಪ್ರಯತ್ನವಾಗಿ ಕಂಡು ಬರುತ್ತವೆ. ಮನುಷ್ಯದ ದೇಹದ ಅಂಗಗಳು ಇಲ್ಲಿ ಸಾಂಕೇತಿಕವಾಗಿ ಕಂಡುಬರುತವತವಷ್ಟೆ. ಸಮಾಜವನ್ನು ಒಬ್ಬ ವ್ಯಕ್ತಿಯಲ್ಲಿ ಕಾಣುವ ವಚನಕಾರ ದೃಷ್ಟಿ ಮತ್ತು ಆಶಯಗಳು ಏನೇ ಇದ್ದರೂ, ಅಂದಿನ ಜಾತಿ ವ್ಯವಸ್ಥೆಯ ಹಾಗೂ ಸಮಾಜದ ರಚನೆಯ ಸ್ವರೂಪವನ್ನು ತಿಳಿಯಲು ಸಹಕಾರಿಯಾಗುತ್ತದೆ.

### ಅ ಬ್ರಾಹ್ಮಣರು

ಪ್ರಾಚೀನ ಮತ್ತು ಮಧ್ಯಕಾಲೀನ ಸಮಾಜದ ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣರು ಉನ್ನತ ಸ್ಥಾನವನ್ನು ಹೊಂದಿದ್ದರು. ಹುಕ್ಕೇರಿ ಪ್ರದೇಶದ ಕೆಲವು ಶಾಸನಗಳಲ್ಲಿ ಉಲ್ಲೇಖಿತವಾದಂತೆ ಇವರು ಸಮಾಜದ ಇತರ ಮೂರು ವರ್ಗಗಳಿಗಿಂತ ಪೂಜ್ಯನೀಯರಾಗಿದ್ದರೆಂದು ತಿಳಿದು ಬರುತ್ತದೆ. ಬ್ರಾಹ್ಮಣರು ಸಮಾಜ ಕ್ಷೇತ್ರದಲ್ಲಿ ಅಗ್ರಸ್ಥಾನ ಗಳಿಸಿದ್ದರು. ರಾಜರು ಮತ್ತು ಸಾಮಂತರು ಇತರ ಅಧಿಕಾರಿಗಳು ಭೂಮಿ, ಹಣ ಹಾಗೂ ಗ್ರಾಮಗಳನ್ನು ಬ್ರಾಹ್ಮಣರಿಗೆ ದಾನ ಮಾಡುತ್ತಿದ್ದರು. ಇದಕ್ಕೆ ಕೆಲವು ಶಾಸನಗಳು ನಿದರ್ಶನಗಳಿವೆ.

ಕ್ರಿ.ಶ. ೯೭೩ರ ಕಾಲದ ಬೆಳವಿ ಶಾಸನವೊಂದರಲ್ಲಿ ರಟ್ಟರ ದೊರೆ ಮಹಾಸಾಮಂತ ಅಂಕರಸನು ಬೆಳವಿ ಅಗ್ರಹಾರಕ್ಕೆ ಭೂಮಿ ಮತ್ತು ಹಣವನ್ನು ದಾನ ನೀಡಿದ್ದನೆಂದು ಉಲ್ಲೇಖವಿದೆ.[೩] ಹುಕ್ಕೇರಿ ಪ್ರದೇಶದ ಅಮ್ಮಣಗಿ ಮತ್ತು ಬೆಳವಿ ಶಾಸನದಲ್ಲಿ ಬ್ರಾಹ್ಮಣರನ್ನು ಮಹಾಜನರೆಂದು ಕರೆಯಲಾಗಿದೆ. ಹೀಗೆ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಪ್ರತಿಷ್ಠೆಯನ್ನು ಪಡೆದು ಎಲ್ಲರಿಂದಲೂ ಗೌರವವನ್ನು ಸಂಪಾದಿಸಿದರು. ಇವರು ವೇದಶಾಸ್ತ್ರಗಳಲ್ಲಿ ಪಾರಂಗತರಾಗಿದ್ದರು.

### ಆ ಕ್ಷತ್ರಿಯರು

ವರ್ಣ ವ್ಯವಸ್ಥೆ ಪದ್ಧತಿಯಲ್ಲಿ ದ್ವಿತೀಯ ಸ್ಥಾನದಲ್ಲಿ ಬರುವವರೇ ಕ್ಷತ್ರಿಯರು. ಬ್ರಾಹ್ಮಣರ ನಂತರದ ಗೌರವ ಸ್ಥಾನಮಾನಗಳು ಇವರಿಗೆ ಸಲ್ಲುತ್ತವೆ. ಧೈರ್ಯ, ಸಾಹಸ, ಶೌರ್ಯ, ತೇಜಸ್ಸು ಮುಂತಾದವುಗಳು ಕ್ಷತ್ರಿಯರ ಗುಣಗಳಾಗಿದ್ದವು. ಕ್ಷತ್ರಿಯರು ಶೂರರು, ಯುದ್ಧಕಲಿಗಳೂ ಆಗಿದ್ದರು. ಹುಕ್ಕೇರಿ ಪ್ರದೇಶದ ಕೆಲವು ಶಾಸನಗಳಲ್ಲಿ ಸೇನಾಪತಿ, ಮಹಾಪ್ರಧಾನ ಮುಂತಾದ ಅಧಿಕಾರಿಗಳನ್ನು ಹೆಸರಿಸುತ್ತದೆ. ಕ್ಷತ್ರಿಯರ ಮುಖ್ಯ ಉದ್ಯೋಗ ರಾಜ್ಯಭಾರ ಮಾಡುವುದು ಸಾಮ್ರಾಜ್ಯದ ಮೇರೆಗಳನ್ನು ವೃದ್ಧಿಸುವುದು ನ್ಯಾಯ ಪರಿಪಾಲನೆ ಪ್ರಜೆಗಳ ಕಲ್ಯಾಣ ಮತ್ತು ಸಾಮ್ರಾಜ್ಯದ ಸುಧಾರಣೆ ಹಾಗೂ ರಕ್ಷಣೆಗಾಗಿ ತಮ್ಮ ಪ್ರಾಣದ ಹಂಗು ತೊರೆದು ಹೋರಾಡಿ ಸಾಮ್ರಾಜ್ಯ ವಿಸ್ತರಣೆ ಮಾಡುವುದು ಇವರ ವೃತ್ತಿ ಧರ್ಮಗಳಾಗಿದ್ದವು. ಯುದ್ಧ ಮಾಡುವ ಸಮಯದಲ್ಲಿ ಸತ್ತರೆ ಸ್ವರ್ಗ, ಗೆದ್ದರೆ ರಾಜ್ಯ ಎಂಬ ವೀರಯುಕ್ತಿಯಿಂದ ನಡೆಯುವವರೇ ಕ್ಷತ್ರಿಯರು.[೪]

ಹುಕ್ಕೇರಿ ಪ್ರದೇಶದ ಶಾಸನಗಳಲ್ಲಿ ಈ ಕ್ಷತ್ರಿಯರ ಕುರಿತು ಪ್ರತ್ಯೇಕವಾದ ವಿವರಣೆ ಬಾರದೇ ಇದ್ದರೂ ಸಹ ಸಾಮಾನ್ಯವಾಗಿ ರಾಜ್ಯಾಡಳಿತವನ್ನು ನೋಡಿಕೊಂಡು ಹೋಗುವ ಅರಸ ಮತ್ತು ಅವನ ಪರಿವಾರದವರೆಲ್ಲರೂ ಕ್ಷತ್ರಿಯರೇ ಆಗಿದ್ದರು. ಇದರಿಂದಾಗಿ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿರುವ ಅರಸರು, ಸಾಮಂತರು, ಹಲವು ಅಧಿಕಾರಿಗಳು ಕ್ಷತ್ರಿಯರಾಗಿದ್ದಾರೆಂದು ಕಂಡು ಬರುತ್ತದೆ.

**ಕ ವೈಶ್ಯರು**

ವೈಶ್ಯರು ಸಮಾಜದಲ್ಲಿ ತೃತೀಯ ವರ್ಣಕ್ಕೆ/ವರ್ಗಕ್ಕೆ ಸೇರಿದವರಾಗಿದ್ದಾರೆ. ಹೆಸರೇ ಸೂಚಿಸುವಂತೆ ಇವರ ಪ್ರಮುಖ ಉದ್ಯೋಗ ವ್ಯಾಪಾರ, ಕೃಷಿ ಮತ್ತು ವಾಣಿಜ್ಯದಲ್ಲಿ ತೊಡಗುವದು. ಪ್ರಾಚೀನ ಮಧ್ಯಕಾಲೀನ ಹುಕ್ಕೇರಿ ಪ್ರದೇಶದಲ್ಲಿ ವೈಶ್ಯರ ಬಗ್ಗೆ ಉಲ್ಲೇಖವಿರುವ ಯಾವುದೇ ಆಧಾರಗಳು ಕಂಡು ಬಂದಿಲ್ಲ. ಒಟ್ಟಿನಲ್ಲಿ ಈ ಪ್ರದೇಶದಲ್ಲಿ ವೈಶ್ಯರು ಇದ್ದರೆಂದು ಹೇಳಬಹುದು.

**ಡ ಶೂದ್ರರು**

ಚತುರ್ವರ್ಣದಲ್ಲಿ ನಾಲ್ಕನೆಯ ವರ್ಣದಲ್ಲಿ ಶೂದ್ರವರ್ಗ ಮೇಲಿನ ಮೂರು ವರ್ಣಗಳ ಸೇವೆಯನ್ನು ಮಾಡುವುದೇ ಈ ವರ್ಗದ ಮುಖ್ಯ ಕಾರ್ಯ. ಈ ವರ್ಗ ಶ್ರಮಿಕ ಜೀವಿಗಳಾಗಿತ್ತು. ಒಟ್ಟಿನಲ್ಲಿ ಚತುರ್ವರ್ಣ ಪದ್ಧತಿಯು ವೇದ ಮತ್ತು ಸ್ಮೃತಿಗಳ ಕಾಲದಲ್ಲಿ ಕಟ್ಟುನಿಟ್ಟಾಗಿದ್ದು, ಕಾಲಾಂತರದಲ್ಲಿ ಅದು ಬದಲಾವಣೆಯನ್ನು ಹೊಂದುತ್ತಾ ಜಾತಿ ವ್ಯವಸ್ಥೆಯಾಗಿ ಮಾರ್ಪಟ್ಟಿತ್ತೆಂದು ಹೇಳಬಹುದು. ಈ ನಿಟ್ಟಿನಲ್ಲಿ ವರ್ಣ ವ್ಯವಸ್ಥೆಯನ್ನು ಅವಲೋಕಿಸಿ ಎಂ. ಚಿದಾನಂದಮೂರ್ತಿಯವರು ಪ್ರಾಚೀನ ಕರ್ನಾಟಕದಲ್ಲಿ ವರ್ಣ ಪದ್ಧತಿಯು ಬಹುಮಟ್ಟಿಗೆ ಕುಸಿದು ಹೋಗಿತ್ತೆಂದು ಅಭಿಪ್ರಾಯಪಟ್ಟಿದ್ದಾರೆ.[೫]

**ಸ್ತ್ರೀಯರ ಸ್ಥಾನಮಾನ**

ವೇದಗಳ ಕಾಲದಲ್ಲಿಯೂ ಸಹ ಸ್ತ್ರೀಯರಿಗೆ ಗೌರವ ಸ್ಥಾನಮಾನಗಳಿದ್ದವು ಎಂದು ವೇದಗಳಿಂದ ತಿಳಿದುಬರುತ್ತದೆ. ರಾಣಿವಾಸದ ಸ್ತ್ರೀಯರಂತೂ ಸಕಲ ಕಲಾವಲ್ಲಭೆಯರಾಗಿ ಆಡಳಿತ, ಧಾರ್ಮಿಕ ಹಾಗೂ ಇತರ ಕ್ಷೇತ್ರಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದುದು ನಮಗೆ ಶಾಸನಗಳಿಂದ ತಿಳಿದುಬರುತ್ತದೆ. ಅಂದಿನ ಕಾಲದ ರಾಣಿಯರ ಬಗ್ಗೆ ಹೆಚ್ಚಿನ ವಿವರಗಳು ಲಭಿಸುತ್ತವೆ ಹೊರತು ಸಮಾಜದಲ್ಲಿನ ಸಾಮಾನ್ಯ ಮಹಿಳೆಯರ ಸ್ಥಾನಮಾನ ಹೇಗಿತ್ತು ಎಂಬುದು ತಿಳಿಯದು.[೬]

ಹುಕ್ಕೇರಿ ಪ್ರದೇಶವನ್ನಾಳಿದ ಅರಸು ಮನೆತನದ ಸ್ತ್ರೀಯರು ದೇವಾಲಯಗಳಿಗೆ, ಅಗ್ರಹಾರಗಳಿಗೆ, ಛತ್ರಕ್ಕೆ ದಾನ ನೀಡಿದಂತೆ ಆಡಳಿತ ಕ್ಷೇತ್ರದಲ್ಲಿಯೂ ಪಾಲ್ಗೊಂಡ ವಿಷಯವು ಈ ಪ್ರದೇಶದ ಶಾಸನಗಳಿಂದ ತಿಳಿದುಬರುತ್ತದೆ.

ಉದಾಹರಣೆಗಾಗಿ ಕ್ರಿ.ಶ. ೧೧೪೯ರ ಕಾಲದ ಬೈರಾಪೂರ ಶಾಸನವೊಂದರಲ್ಲಿ ರಟ್ಟರ ರಾಣಿ ಲಲಿತೇಯದೇವಿ ತನ್ನ ಮಹಾಪ್ರಧಾನ ಸೇನಾಪತಿಯಾದ ನಾಗಯ್ಯ ನಾಯಕ ಈತನಿಗೆ ಮತ್ತಿವಾಡದಲ್ಲಿಯ ಛತ್ರವನ್ನು ನಡೆಸುವುದಕ್ಕಾಗಿ ಭೂಮಿ, ಮನೆ, ಹುಲ್ಲು, ಬಣವಿಯನ್ನು ದಾನ ನೀಡಿದಳೆಂದು ಉಲ್ಲೇಖವಿದೆ.[೭] ಹುಕ್ಕೇರಿ ಪ್ರದೇಶದಲ್ಲಿ ದೊರೆತ ವೀರಗಲ್ಲುಗಳು, ಮಾಸ್ತಿಗಲ್ಲುಗಳಿಂದ ಅಂದಿನ ಪ್ರಾಚೀನ, ಮಧ್ಯಕಾಲೀನ ಜನಸಾಮಾನ್ಯರ ವೇಷಭೂಷಣಗಳ ಕುರಿತು ತಿಳಿದುಬರುತ್ತದೆ. ಸ್ತ್ರೀಯರು ಮಡಿಸೀರೆ, ಕುಪ್ಪಸ, ಕಾಲ್ಗಡಗ, ಕೈಬಳೆ, ಕಿವಿಯೋಲೆ, ತೋಳಬಂದಿ, ಸೊಂಟಪಟ್ಟಿ ಇನ್ನೂ ಮುಂತಾದ ಆಭರಣಗಳನ್ನು ಧರಿಸುತ್ತಿದ್ದರೆಂದು ಕಂಡುಬಂದಿದೆ. ಇಂತಹ ಮೂರ್ತಿ ಶಿಲ್ಪಗಳನ್ನು ಸಂಕೇಶ್ವರದ ನಾರಾಯಣ ದೇವಾಲಯದ ಹೊರಗಿನ ಗೋಡೆಯಲ್ಲಿ ಬರೆಯುತ್ತಿರುವ ಶಿಲಾಬಾಲಿಕೆ, ದರ್ಪಣ ಸುಂದರಿ, ನೃತ್ಯಗಾತಿ ಇತ್ಯಾದಿ ವಿಗ್ರಹಗಳನ್ನು ಕೆತ್ತಿರುವದನ್ನು ಇಂದಿಗೂ ನೋಡಬಹುದು.

ಪುರುಷರ ಉಡುಗೆಗಳು ಅಷ್ಟೊಂದು ಆಡಂಬರಮಯವಾಗಿರಲಿಲ್ಲ. ಧೋತರ, ತಲೆಗೊಂದು ಸುತ್ತಿದ ರುಮಾಲು, ಟೊಂಕಕ್ಕೆ ಒಂದು ಶಲ್ಯ ಕಟ್ಟಿಕೊಳ್ಳುತ್ತಿದ್ದುದು ಕಂಡು ಬಂದಿದೆ.

### ಅ ವೀರಗಲ್ಲುಗಳು

ಯುದ್ಧದಲ್ಲಿ ಹೋರಾಡಿ ಮಡಿದವರ ವೀರರ ಸ್ಮಾರಕವಾಗಿ ಸ್ಥಾಪಿಸುತ್ತಿದ್ದ ಕಲ್ಲುಗಳೇ ವೀರಗಲ್ಲುಗಳು. ವೀರಗಲ್ಲುಗಳಲ್ಲಿ ಹಲವಾರು ಪಟ್ಟಿಕೆಗಳಿರುತ್ತವೆ. ಹುಕ್ಕೇರಿ ಪ್ರದೇಶದಲ್ಲಿ ಕಂಡು ಬರುವ ವೀರಗಲ್ಲುಗಳಲ್ಲಿ ಹೆಚ್ಚಾಗಿ ಮೂರು ಮತ್ತು ನಾಲ್ಕು ಪಟ್ಟಿಕೆಗಳನ್ನು ಹೊಂದಿದೆ. ವೀರಗಲ್ಲುಗಳನ್ನು ಗುರ್ತಿಸುವುದು ಸಾಮಾನ್ಯ ಮತ್ತು ಸುಲಭ. ಕಾರಣ ಅವುಗಳ ಕೆಳಗಿನ ಪಟ್ಟಿಯಲ್ಲಿ ವೀರ ಶತ್ರುಗಳೊಡನೆ ಹೋರಾಡುವ ದೃಶ್ಯ, ಮಧ್ಯಮ ಪಟ್ಟಿಕೆಯಲ್ಲಿ ದೇವತಾ ಸ್ತ್ರೀಯರು ಯುದ್ಧದಲ್ಲಿ ಮಡಿದ ವೀರರನ್ನು ಸ್ವರ್ಗಕ್ಕೆ ಕೊಂಡೊಯ್ಯುವುದು, ಮೇಲಿನ ಪಟ್ಟಿಕೆಯಲ್ಲಿ ವೀರನು ದೇವರ ಸಾನಿಧ್ಯದಲ್ಲಿ ಇರುವಂತೆ ಕೆತ್ತಲಾಗಿರುತ್ತದೆ. ವೀರಗಲ್ಲು ಮೇಲೆ ಬರಹವಿರುವುದು, ಇಲ್ಲದಿರಬಹುದು. ಅದನ್ನು ಚಿತ್ರಗಳ ಮೇಲೆ ಗುರ್ತಿಸುವುದು, ಮಡಿದ ವೀರನ ಶಾಶ್ವತ ನೆನಪಿಗಾಗಿ ಕೆತ್ತಿಸಲು ಪ್ರಾರಂಭಿಸಿದರು.

ವೀರಗಲ್ಲುಗಳು ಹುಕ್ಕೇರಿ ಸುತ್ತಮುತ್ತಲಿನ ಗ್ರಾಮದಲ್ಲಿನ ಶಾಸನಗಳಿಂದ ಸುರಪುರ, ಬೆಳವಿ, ಸಂಕೇಶ್ವರ, ಹತ್ತರಗಿ, ಉಳ್ಳಾಗಡ್ಡಿ, ಖಾನಾಪುರ, ಬೆನಿವಾಡ, ಕೊಟಬಾಗಿ, ಘೋಡಗೇರಿ ಹಾಗೂ ಇನ್ನೂ ಹಲವಾರು ಗ್ರಾಮಗಳಲ್ಲಿ ಕಂಡುಬರುತ್ತವೆ. ಇದರಿಂದ ಹುಕ್ಕೇರಿ ಪ್ರದೇಶವು ವೀರ, ಶೂರರ ನಾಡಾಗಿತ್ತೆಂದು ತಿಳಿದು ಬರುವುದು.

### ಬ ಮಾಸ್ತಿಗಲ್ಲು

ಪ್ರಾಚೀನ ಕಾಲದಲ್ಲಿ ಗಂಡನ ಮರಣದ ನಂತರ ಆತನ ಹೆಂಡತಿ ಸತಿಸಹಗಮನ ಇಲ್ಲವೆ ಅನುಗಮನದ ಮೂಲಕ ಮಹಾಸತಿಯಾಗಿದ್ದ ಮಾಸ್ತಿಗಲ್ಲುಗಳು ವೀರಗಲ್ಲು ವೀರ ಮಹಿಳೆಯ ಸಂಕೇತವಾಗಿರುತ್ತದೆ. ಪತಿಯು ಸತ್ತ ಮೇಲೆ ಅವನ ಜೊತೆ ಪ್ರಾಣತ್ಯಾಗ ಮಾಡುವ ಸ್ತ್ರೀಯರನ್ನು ಮಹಾಸತಿ ಅಥವಾ ಮಾಸ್ತಿ ಎಂದು ಕರೆಯುತ್ತಾರೆ.

ಸಹಗಮನದ ಪ್ರಮುಖ ಉದ್ದೇಶ, ಪತಿನಿಷ್ಠೆ ಹಾಗೂ ಮುಕ್ತಿ. ಈ ಮಾಸ್ತಿಗಲ್ಲುಗಳಲ್ಲಿ ಸಾಮಾನ್ಯವಾಗಿ ಬಲಗೈಯನ್ನು ಮೇಲಕ್ಕೆತ್ತಿದ ಹೆಂಗಸಿನ ಪೂರ್ಣ ಚಿತ್ರವಿರುತ್ತದೆ. ಕೆಲವುಗಳಲ್ಲಿ ಮೇಲಕ್ಕೆತ್ತಿದ ಬಲಗೈ ಮಾತ್ರವಿರುತ್ತದೆ. ಕೆಳಗಿನ ಪಟ್ಟಿಯಲ್ಲಿ ವೀರ ಶತ್ರುಗಳ ಜೊತೆ ಹೋರಾಡುತ್ತಿರುವ ಚಿತ್ರ, ಎರಡನೇ ಪಟ್ಟಿಕೆಯಲ್ಲಿ ಸತಿಪತಿ ಕೂಡು ನಿಂತ ಚಿತ್ರ, ಪಕ್ಕದ ಮತ್ತೊಂದು ಚಿತ್ರದಲ್ಲಿ ಮಕ್ಕಳೊಂದಿಗೆ ಇರುವ ಚಿತ್ರ, ಮೂರನೇ ಪಟ್ಟಿಯಲ್ಲಿ ಸತಿಪತಿಯರನ್ನು ಅಪ್ಸರೆಯರು ಕರೆದುಕೊಂಡೊಯ್ಯುವುದು, ನಾಲ್ಕನೇ ಪಟ್ಟಿಯಲ್ಲಿ ದೇವರ ಸಾನಿಧ್ಯದಲ್ಲಿ ಅವರಿಬ್ಬರು ಕುಳಿತಿರುವ ಚಿತ್ರಗಳು ಕಂಡುಬರುತ್ತವೆ.

### ಕೋಟೆಗಳು

ಶತ್ರುಗಳ ದಾಳಿಯನ್ನು ಯಾವ ಸಮಯದಲ್ಲಾದರೂ ಎದುರಿಸಬೇಕಾದ ಸಂದರ್ಭದಲ್ಲಿ ಕೋಟೆಯು ಭದ್ರತೆಯೊದಗಿಸುವ ಪ್ರಮುಖ ಸಾಧನವಾಗಿತ್ತು. ಆದ್ದರಿಂದ ಹಿಂದೆ ಊರುಗಳಿಗೆ ಅದರಲ್ಲೂ ರಾಜಧಾನಿ ಪಟ್ಟಣಗಳಿಗೆ ಕೋಟೆ ಅಥವಾ ದುರ್ಗ ಅತ್ಯಂತ ಅವಶ್ಯಕವಾಗಿತ್ತು. ಶತ್ರುಗಳು ತಮ್ಮ ಮೇಲೆ ನುಗ್ಗಿ ಬರದಂತೆ ತಡೆಯುವುದಕ್ಕೆ ಮತ್ತು ಸುಭದ್ರವಾದ ಸ್ಥಿತಿಯಲ್ಲಿ ನಿಂತ ಸದೆ ಬಡಿಯುವದಕ್ಕೆ ಅನುಕೂಲ ಮಾಡಿಕೊಳ್ಳುವುದಕ್ಕಾಗಿ ಕೋಟೆಗಳನ್ನು ರಚಿಸಲಾಗುತ್ತಿತ್ತು.[೮]

ಹುಕ್ಕೇರಿಯಲ್ಲಿ ಪುರಾತನ ಕಾಲದ ಕೋಟೆ ಇರುವುದನ್ನು ಕಾಣಬಹುದು. ಪ್ರಸ್ತುತ ಅದು ಹಾಳಾಗಿದೆ. ಪ್ರವೇಶ ದ್ವಾರವನ್ನು ಮಾತ್ರ ನೋಡಬಹುದು. ಅದೇ ರೀತಿ ಶಿವಾಜಿ ಆಳ್ವಿಕೆಯ ಕಾಲದಲ್ಲಿ ನಿರ್ಮಾಣವಾದ ಕೋಟೆಯನ್ನು ಹರಗಾಪುರದಲ್ಲಿದೆ. ಇನ್ನೂ ಹಲವು ಗ್ರಾಮಗಳಲ್ಲಿ ಕೋಟೆ ಮತ್ತು ವಾಡೆಯ ಅವಶೇಷಗಳು ಕಂಡುಬರುತ್ತವೆ.

## ದಾನ ಶಾಸನಗಳು

ಪ್ರಾಚೀನ ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ವ್ಯವಸ್ಥೆಯಲ್ಲಿ ನಡೆದುಕೊಂಡು ಬಂದಿರುವ ಸಾರ್ವಜನಿಕ ಚಟುವಟಿಕೆಗಳಲ್ಲಿ ದಾನ ಕಾರ್ಯವು ಒಂದಾಗಿದ್ದು ಹುಕ್ಕೇರಿ ಪ್ರದೇಶದಲ್ಲಿಯೂ ಈ ಕಾರ್ಯವು ಪ್ರಚಲಿತದಲ್ಲಿತ್ತೆಂಬುದಕ್ಕೆ ಈ ಪ್ರದೇಶದ ಶಾಸನಗಳೇ ಸಾಕ್ಷಿಗಳಾಗಿವೆ.

ಅಂದಿನ ಸಮಾಜದಲ್ಲಿ ಬಾಳಿ ಬೆಳೆದ ರಾಜ, ರಾಣಿಯರು, ಸಾಮಂತರು, ಇತರ ಅಧಿಕಾರಿಗಳು ಅನೇಕ ದಾನಗಳನ್ನು ಸಮಾಜ ಕಾರ್ಯಕ್ಕೆ ಕೊಟ್ಟಿದ್ದಾರೆಂದು ಶಾಸನಗಳಲ್ಲಿ ಉಲ್ಲೇಖಗಳಿವೆ. ಕ್ರಿ.ಶ.೧೨೬೨ ಕಾಲದ ಅರ್ಜುನವಾಡ ಶಾಸನದಲ್ಲಿ ಯಾದವ ಅರಸನಾದ ಕನ್ನರಸನು 'ಕವಿಳಾಸ ಪುರ'ವನ್ನು ಬಸವಣ್ಣನವರ ವಂಶಜನಿಗೆ ದಾನ ನೀಡಿದ್ದು ಉಲ್ಲೇಖವಿದೆ. ಕ್ರಿ.ಶ. ೧೧೪೪ರ ಬೈರಾಪುರ ಶಾಸನವೊಂದರಲ್ಲಿ ರಟ್ಟರಸ ರಾಣಿ ಲಲತೇದೇವಿ ತನ್ನ ಮಹಾಪ್ರಧಾನ ಸೇನಾಪತಿ ನಾಗತ್ಯ ನಾಯಕನಿಗೆ ಛತ್ರವನ್ನು ನಡೆಸುವುದಕ್ಕಾಗಿ ಭೂಮಿ,[೧೦] ಮನೆಯನ್ನು ದಾನ ನೀಡಿದ ಉಲ್ಲೇಖವಿದೆ. ಇನ್ನೂ ಹಲವು ಶಾಸನಗಳಲ್ಲಿ ದೇವಾಲಯಗಳಿಗೆ. ಛತ್ರಗಳಿಗೆ, ಅಗ್ರಹಾರಗಳಿಗೆ ದಾನ ನೀಡಿದ ಉಲ್ಲೇಖ ಕಂಡುಬರುತ್ತದೆ.

## ಧಾರ್ಮಿಕ ವ್ಯವಸ್ಥೆ

ಮಾನವ ಸಂಸ್ಕೃತಿ ನಿರ್ಮಾಣದಲ್ಲಿ ಧರ್ಮಕ್ಕೆ ಕೇಂದ್ರಸ್ಥಾನವಿದೆ. ಧರ್ಮಾರಹಿತವಾದ ಸಂಸ್ಕೃತಿಯನ್ನು ಇತಿಹಾಸದಲ್ಲಿ ನಾವು ಎಂದಿಗೂ ಕಾಣಲು ಸಾಧ್ಯವಿಲ್ಲ. ಭಾರತವು ಅನೇಕ ಧರ್ಮ, ಸಂಸ್ಕೃತಿಗಳ ಆಗರ, ಧಾರ್ಮಿಕ ಆಚಾರ–ವಿಚಾರಗಳು ಭಾರತೀಯರಲ್ಲಿ ಹುಟ್ಟಿ ಬೆಳೆದಷ್ಟು ಬೇರೆ ಜನಾಂಗಗಳಲ್ಲಿ ಹುಟ್ಟಿ ಬೆಳೆದಿಲ್ಲವೆಂದು ಹೇಳಬೇಕಾಗುತ್ತದೆ. ಹಲವು ಜಾಗತಿಕ ಧರ್ಮಗಳ ತವರು ಮನೆಯಾಗಿರುವ ಭಾರತ ಹಲವಾರು ಬುಡಕಟ್ಟು ಜನಾಂಗದ ಧರ್ಮಗಳನ್ನು ಉಳಿಸಿ ಬೆಳೆಸಿಕೊಂಡು ಬಂದಿದೆ. ಭಾರತದ ಒಂದು ಅವಿಭಾಜ್ಯ ಅಂಗವಾಗಿರುವ ಕರ್ನಾಟಕವೂ ಇದಕ್ಕೆ ಹೊರತಾಗಿಲ್ಲ. ಅದರಂತೆ ಕರ್ನಾಟಕದ ಒಂದು ಪ್ರದೇಶವಾಗಿರುವ ಹುಕ್ಕೇರಿ ಪ್ರದೇಶವು ಜೈನ, ಶೈವ, ವೀರಶೈವ, ವೈಷ್ಣವ ಹಾಗೂ ಮುಸ್ಲಿಂ ಮತಗಳ ಅಸ್ತಿತ್ವವನ್ನು ಹೊಂದಿ ಧಾರ್ಮಿಕ ಕೇಂದ್ರವಾಗಿ ಬೆಳೆದು ಬಂದಿದೆ ಎಂಬುದು ಆಯಾ ಕಾಲದಲ್ಲಿ ನಿರ್ಮಾಣಗೊಂಡ ದೇವಾಲಯಗಳು, ಬಸದಿಗಳು, ಮೂರ್ತಿಶಿಲ್ಪಗಳು, ಗುಮ್ಮಟಗಳು ಮತ್ತು ಶಾಸನಗಳಿಂದ ತಿಳಿದುಬರುವುದು.

## ಅ ಜೈನ ಧರ್ಮ

ಭರತ ಖಂಡದ ಪ್ರಮುಖ ಧರ್ಮಗಳಲ್ಲಿ ಜೈನ ಧರ್ಮ ಒಂದಾಗಿದೆ. ದಕ್ಷಿಣ ಭಾರತದ ಜೈನ ಧರ್ಮದ ಇತಿಹಾಸವೆಂದರೆ ಕರ್ನಾಟಕದ ಜೈನಧರ್ಮದ ಇತಿಹಾಸವೇ ಆಗಿದೆ. ಕ್ರಿ.ಪೂ. ೩ನೇ ಶತಮಾನದ ಸುಮಾರಿಗೆ ಮೌರ್ಯರ ಸಾಮ್ರಾಟ ಚಂದ್ರಗುಪ್ತ ಹಾಗೂ ಅವನ ಧರ್ಮಗುರು ಭದ್ರಬಾಹುವಿನ ಮೂಲಕ ಕನ್ನಡ ನಾಡಿನಲ್ಲಿ ಕಾಲಿಟ್ಟಿತೆಂಬುದು ಇತಿಹಾಸ ಪ್ರಸಿದ್ಧವಾಗಿದೆ.[೧೧] ಕನ್ನಡನಾಡಿನ ಗಂಗ, ಹೊಯ್ಸಳರಂತಹ ರಾಜಮನೆತನಗಳು ಜೈನಧರ್ಮಕ್ಕೆ ವಿಶೇಷವಾಗಿ ಒಲಿದಿದ್ದರಲ್ಲದೆ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರಂತಹ ಪ್ರಮುಖ ರಾಜವಂಶಗಳು ಜೈನಧರ್ಮಕ್ಕೆ ಪ್ರೋತ್ಸಾಹ ನೀಡಿದವು. ಇದರಿಂದ ಕನ್ನಡ ನೆಲವೆಲ್ಲವೂ ಜೈನಮಯವಾಗುತ್ತಿದ್ದಂತಹ ಕಾಲದಲ್ಲಿ ಹುಕ್ಕೇರಿ ಪ್ರದೇಶವು ಸಹ ಜೈನ ಧರ್ಮದ ಪ್ರಭಾವದಿಂದ ಹೊರತಾಗಿರಲಿಲ್ಲವೆಂಬುದಕ್ಕೆ ಇಲ್ಲಿ ಕಂಡು ಬರುವ ಪ್ರಾಚೀಣ ಬಸದಿಗಳು, ಜೈನಮೂರ್ತಿ

ಶಿಲ್ಪಗಳು ಈ ಪ್ರದೇಶದಲ್ಲಿ ಬಾಳಿ ಬೆಳಗಿದ ಜೈನ ಪರಂಪರೆ ಕಾರಣೀಭೂತವಾಗಿವೆ. ಹುಕ್ಕೇರಿ ಪ್ರದೇಶದಲ್ಲಿ ಕಂಡು ಬರುವ ಬಸದಿಗಳು ಹಾಗೂ ಜೈನ ಮೂರ್ತಿಗಳು ಹುಕ್ಕೇರಿ ಪ್ರದೇಶದಲ್ಲಿ ಕಲ್ಯಾಣಿ ಚಾಲುಕ್ಯರು ಮತ್ತು ಸವದತ್ತಿ ರಟ್ಟರ ಕಾಲದಲ್ಲಿ ನಿರ್ಮಾಣವಾದ ಹಲವು ಬಸದಿಗಳು ಕಂಡುಬಂದಿವೆ. ಅವು ಅಮ್ಮಣಗಿ ಗ್ರಾಮದಲ್ಲಿ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಜೈನ ಬಸದಿ ಬಹಳ ಸುಂದರವಾಗಿದೆ. ಈ ಗ್ರಾಮದಲ್ಲಿ ಜೈನಧರ್ಮದವರು ಮಾತ್ರ ಇದ್ದರೆಂದು ಹೇಳುತ್ತಾರೆ. ಪ್ರಸ್ತುತ ಈ ಗ್ರಾಮದಲ್ಲಿ ಜೈನ ಧರ್ಮದ ಜನರೇ ಇರುವುದಿಲ್ಲ.

ಸಂಕೇಶ್ವರ, ಬೆಲ್ಲದಬಾಗೇವಾಡಿ, ಹುಕ್ಕೇರಿ, ಬೆನಿವಾಡ ಇನ್ನೂ ಮುಂತಾದ ಗ್ರಾಮಗಳಲ್ಲಿ ಪ್ರಾಚೀನ ಜೈನ ಬಸದಿಗಳಿರುವುದನ್ನು ಕಾಣಬಹುದು. ಇದಲ್ಲದೆ ಹುಕ್ಕೇರಿ ಪ್ರದೇಶದ ಸುತ್ತಮುತ್ತಲಿನ ಗ್ರಾಮಗಳಲ್ಲಿ ದೊರೆತಂತಹ ಮೂರ್ತಿಶಿಲ್ಪಗಳಲ್ಲಿ ಅರ್ಧ ಭಾಗದಷ್ಟು ಜೈನಮೂರ್ತಿ ಶಿಲ್ಪಗಳಾಗಿವೆ ಹಾಗೂ ಕೆಲವೊಂದು ಗ್ರಾಮಗಳಲ್ಲಿ ಜೈನಬಾಂಧವರಿಲ್ಲ. ಆದರೆ ಅಲ್ಲಿ ಪ್ರಾಚೀನ ಬಸದಿಗಳಿವೆ. ಉದಾ: ಘೋಡಗೇರಿ, ಬೆನಿವಾಡ, ಅಮ್ಮಣಗಿ ಇವುಗಳಿಂದ ಪ್ರಾಚೀನ ಕಾಲದಲ್ಲಿ ಹುಕ್ಕೇರಿ ಪ್ರದೇಶದಲ್ಲಿ ಜೈನಧರ್ಮ ಪ್ರಮುಖ ಧರ್ಮವಾಗಿತ್ತೆಂದು ನಮಗೆ ತಿಳಿದುಬರುವುದು.

### ಬ ಶೈವ ಧರ್ಮ

ಭರತ ಖಂಡದಲ್ಲಿ ಶೈವ ಧರ್ಮವು ಅತ್ಯಂತ ಪ್ರಾಚೀನವಾದ ಧರ್ಮಗಳಲ್ಲೊಂದು ಶಿವೋಪಾಸನೆಯ ಇತಿಹಾಸವು ವೇದಗಳಿಗಿಂತಲೂ ಹಿಂದಕ್ಕೆ ಹೋಗುತ್ತದೆ.[೧೨] ಹರಪ್ಪಾ, ಮೆಹೆಂಜೋದಾರು (ಸೈಂದವ) ಸಂಸ್ಕೃತಿಯಲ್ಲಿ ಪಶುಪತಿಯ ಚಿತ್ರವಿರುವ ಮುದ್ರಿಕೆ(seals)ಗಳು, ಲಿಂಗಗಳು ದೊರಕಿರುವದು. ಇದಕ್ಕೆ ಪುರಾವೆಯನ್ನು ಒದಗಿಸುತ್ತದೆ.[೧೩] ಋಗ್ವೇದ ಕಾಲದ ರುದ್ರನು ದುಷ್ಟ ಶಕ್ತಿಗಳಿಗೆ ಅಧಿಪತಿಯೆಂದೂ ಮುಂದೆ ಶಿವನಾದನೆಂದು ಹೇಳಬಹುದು. ವೇದದ ಈಚಿನ ಭಾಗಗಳಲ್ಲಿ 'ಶಿವ' ಎಂಬುದು ವಿಶಿಷ್ಟ. ವಿಶೇಷಣವಾಗಿ ಪರಿಣಮಿಸಿ ಅವನನ್ನು ಮಹಾದೇವ ಎಂದು ಕರೆದಿರುವುದೂ ಉಂಟು.[೧೪] ಕಾಲಾಂತರದಲ್ಲಿ ರುದ್ರ ಶಿವನಿಗೆ ಪಶುಪತಿ ಎಂಬುದು ಒಂದು ವಿಶಿಷ್ಟ ವಿಶೇಷಣವಾಗಿ ಪರಿಣಮಿಸಿತು. ಹುಕ್ಕೇರಿ ಪ್ರದೇಶದಲ್ಲಿ ಕಂಡು ಬಂದಂತಹ ಪ್ರಾಚೀನ ದೇವಾಲಯಗಳಲ್ಲಿ ಹೆಚ್ಚಾಗಿ ಶೈವ ದೇವಾಲಯಗಳು ಕಂಡು ಬಂದಿವೆ. ಇದಲ್ಲದೆ ಶಿವಲಿಂಗಗಳು, ಶೈವ ಮೂರ್ತಿಶಿಲ್ಪಗಳು, ಶಾಸನಗಳು ಈ ಧರ್ಮಕ್ಕೆ ಸಂಬಂಧಿಸಿದ ಮಾಹಿತಿಯನ್ನು ಒದಗಿಸುತ್ತದೆ.

ಕ್ರಿ.ಶ. ೯೭೬ರ ಕಲ್ಯಾಣ ಚಾಲುಕ್ಯ ಅರಸರ ತ್ರೈಲೋಕ್ಯ ಮಲ್ಲದೇವನ ಕೋಚರಿ ಶಾಸನವು ತ್ರೀಕೂಟೇಶ್ವರ ದೇವಾಲಯಕ್ಕೆ ದಾನ ನೀಡಿದ ಉಲ್ಲೇಖವಿದೆ.[೧೫] ಈ ಗ್ರಾಮದಲ್ಲಿ ಪ್ರಾಚೀನ ಕಾಲದ ದೇವಾಲಯವಿದೆ. ಇದೇ ತ್ರಿಕೂಟೇಶ್ವರ ದೇವಾಲಯವಿರಬಹುದು. ಗರ್ಭಗೃಹದಲ್ಲಿ ಬೃಹತ್ ಗಾತ್ರದ ಶಿವಲಿಂಗವಿದೆ. ಪ್ರಸ್ತುತ ಇಲ್ಲಿ ಈ ಗುಡಿ ಹಾಳಾಗಿದೆ. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ಶಿಖರೇಶ್ವರ ಎಂಬ ಶೈವ ದೇವಾಲಯ ಹತ್ತರಗಿಯಲ್ಲಿ ಕಾಣಬಹುದು. ಇವುಗಳಲ್ಲದೇ ಇನ್ನೂ ಹಲವು ಪ್ರಾಚೀನ ಶೈವ ದೇವಾಲಯಗಳಾದ ಸಂಕೇಶ್ವರದ ಶಂಕರಲಿಂಗ ದೇವಾಲಯ, ಸುಲ್ತಾನಪುರದ ರಾಮಲಿಂಗೇಶ್ವರ ದೇವಾಲಯ, ಪಾಶ್ಚಾಪುರದ ಮಲ್ಲಿಕಾರ್ಜುನ, ಶಿಪ್ಪೂರದ ರಾಮಲಿಂಗೇಶ್ವರ ದೇವಾಲಯ, ಘೋಡಗೇರಿಯ ನೀಲಕಂಠೇಶ್ವರ ಮತ್ತು ರಾಮಲಿಂಗೇಶ್ವರ ದೇವಾಲಯಗಳು ಅವುಗಳ ಆಧಾರದ ಮೇಲೆ ಹುಕ್ಕೇರಿ ಪ್ರದೇಶದಲ್ಲಿ ಶೈವಧರ್ಮ ಪ್ರಮುಖ ಧರ್ಮವಾಗಿತ್ತೆಂದು ತಿಳಿದುಬರುವುದು.

### ಕ ವೀರಶೈವ ಧರ್ಮ

ಶೈವ ಧರ್ಮದ ವಿವಿಧ ಶಾಖೆಗಳಲ್ಲಿ ಒಂದಾದ ವೀರಶೈವ ಧರ್ಮ ಕರ್ನಾಟಕದಲ್ಲಿ ರೂಪಗೊಂಡು ಅನಂತರ ನೆರೆಹೊರೆಯ ಪ್ರಾಂತ್ಯಗಳಾದ ಆಂಧ್ರ, ಮಹಾರಾಷ್ಟ್ರ ಮತ್ತು ತಮಿಳುನಾಡಿನ ಪ್ರಾಂತ್ಯಗಳನ್ನು ವ್ಯಾಪಿಸಿತ್ತು. ಅನೇಕ ವಿಚಾರಗಳಲ್ಲಿ ವೈದಿಕ ಧರ್ಮದಿಂದ ಭಿನ್ನವಾದ ವೀರಶೈವ ಧರ್ಮ ಕರ್ನಾಟಕದ ಜನಜೀವನ ಅವರ ಸಂಸ್ಕೃತಿ ಮತ್ತು ಸಾಹಿತ್ಯ ಇವುಗಳ ಮೇಲೆ ಆಳವಾದ ಪ್ರಭಾವವನ್ನು ಬೀರಿದೆ. ನಂತರ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಿನ್ನೆಲೆಯಲ್ಲಿ ಹೊಸ ರೂಪ ತಾಳುತ್ತಾ ಇಂದಿನ ಲಿಂಗಾಯತ ಧರ್ಮವಾಗಿ ಉಳಿಯಿತು. ೧೨ನೆಯ ಶತಮಾನದಲ್ಲಿ ವ್ಯಾಪಕ ಪ್ರಭಾವ ಬೀರಿದ ವೀರಶೈವ ಧರ್ಮ ಶೈವ ಧರ್ಮ ಬೆಳವಣಿಗೆಯಲ್ಲಿ ಬಹುಶಃ ಪರಿಪೂರ್ಣತೆಯನ್ನು ಸಾಧಿಸಿದ ಶಾಖೆಯಾಗಿದೆ.[೧೬] ವೀರಶೈವ ಧರ್ಮವೂ ಸಾಮಾನ್ಯವಾಗಿ ಶಿವಾಗಮಗಳನ್ನು ಪ್ರಮಾಣವೆಂದು ಭಾವಿಸುತ್ತದೆ. ವೀರಶೈವ ಧರ್ಮ ಮಾರ್ಗದ ಷಟ್‌ಸ್ಥಳ ಅಷ್ಟಾವರಣ, ಪಂಚಾಚಾರಗಳು ಕಲ್ಯಾಣ ಶರಣರು ಹೊಸ ತಾತ್ವಿಕ ನಿಲುವಿನ ಕೊಡುಗೆಗಳಾಗಿವೆ. ಬಸವಣ್ಣನವರ ಕಾಲದಲ್ಲಿ ಇವು ನಿರ್ದಿಷ್ಟ ಸ್ವರೂಪವನ್ನು ಪಡೆದು ಸರ್ವಸಮಾನತೆಯ ತನ್ನ ಆಶಯವನ್ನು ಬಹುದೊಡ್ಡ ಪ್ರಮಾಣದಲ್ಲಿ ಈಡೇರಿಸುವ ಶಕ್ತಿಯುತ ಧರ್ಮವಾಗಿ ಪರಿಣಮಿಸಿತು.[೧೭]

ಧಾರ್ಮಿಕ ರಂಗದಲ್ಲಿ ಮಾನವರೆಲ್ಲರೂ ಸಮಾನರು, ಭಗವಂತನ ಸಾಕ್ಷಾತ್ಕಾರ ಮಾನವನ ಹಕ್ಕು ಎಂದು ಬೋಧಿಸಿದ ವೀರಶೈವ ಧರ್ಮ ೧೨ನೆಯ ಶತಮಾನದಲ್ಲಿ ಬಂದ ಶರಣ ಸಂತತಿಯಿಂದಾಗಿ ಕರ್ನಾಟಕದಲ್ಲಿ ಸುವರ್ಣಯುಗವನ್ನೇ ಕಂಡಿತು. ಅದೇ ರೀತಿ ಹುಕ್ಕೇರಿ ಪ್ರದೇಶದಲ್ಲಿಯೂ ಸಹ ವೀರಶೈವ ಧರ್ಮ ಧಾರ್ಮಿಕ ಕ್ರಾಂತಿಯನ್ನು ಮಾಡಿರಬಹುದು. ಏಕೆಂದರೆ ದೇವಗಿರಿ ಯಾದವ ಅರಸ ಕನ್ನರಸನ ಕಾಲದಲ್ಲಿ ನಿರ್ಮಾಣವಾದ ಕ್ರಿ.ಶ. ೧೧೮೨ರ ಅರ್ಜುನವಾಡ ಶಿಲಾಶಾಸನ. ಈ ಶಾಸನದಲ್ಲಿ ಬಸವಣ್ಣನವರ ಅಣ್ಣನಾದ ದೇವರಾಜನ ಮೊಮ್ಮಗ ಹಾಲಬಸವೇಶ 'ಕವಿಳಾಸಪುರ'ದಲ್ಲಿ ನೆಲೆಸಿದ್ದನೆಂದು ತಿಳಿದು ಬರುವುದು ಹಾಗೂ ವಂಶಾವಳಿ ಈ ಶಾಸನದಲ್ಲಿ ಉಲ್ಲೇಖವಿದೆ.[೧೮] ಅರ್ಜುನವಾಡ ಗ್ರಾಮದಲ್ಲಿಯೇ ಕವಿಳಾಸಪುರದ ಚತುಸ್ಸೀಮೆಯನ್ನು ಸೂಚಿಸಲಿಕ್ಕೆ ನೆಟ್ಟಂತಹ ಅವರಲ್ಲಿಯ ಒಂದು ಸೀಮೆ ಅಥವಾ ಅಳತೆ ಕಲ್ಲು ದೊರೆತಿದೆ.

ಅದರಲ್ಲಿ ಈ ರೀತಿ ಉಲ್ಲೇಖವಿದೆ

'ಶ್ರೀ ಬಸವಣ್ಣದಂ ಣ್ಣಾಯಕರ ಕೇ'[೧೯]

ಕ್ರಿ.ಶ. ೧೨ನೆಯ ಶತಮಾನದಲ್ಲಿ ಹುಕ್ಕೇರಿ ಪ್ರದೇಶವೂ ವೀರಶೈವ ಧರ್ಮದ ಪ್ರಮುಖ ಸ್ಥಳವಾಗಿತ್ತೆಂದು ಹೇಳಬಹುದು. ಇಂದಿಗೂ ಈ ಪ್ರದೇಶದಲ್ಲಿ ಹಲವು ವೀರಶೈವ ಈ ಪ್ರದೇಶದಲ್ಲಿ ಮಠಗಳು ಕಂಡುಬರುತ್ತವೆ.

### ಡ ವೈಷ್ಣವ ಧರ್ಮ

ಹಿಂದೂ ಧರ್ಮದ ಮತ್ತೊಂದು ಶಾಖೆಯಾದ ಈ ವೈಷ್ಣವ ಧರ್ಮವು ದಕ್ಷಿಣ ಭಾರತವನ್ನು ಕ್ರಿ.ಶ. ಪೂರ್ವದಲ್ಲಿಯೇ ಪ್ರವೇಶಿಸಿದ್ದಿತ್ತೆಂದು ತಿಳಿದು ಬರುತ್ತದೆ.[೨೦] ಕರ್ನಾಟಕದಲ್ಲಿ ಆಳಿ ಹೋಗಿ ಅನೇಕ ಅರಸು ಮನೆತನಗಳು ವೈಷ್ಣವ ಧರ್ಮವಲಂಬಿಗಳಾಗಿದ್ದು, ಬಾದಾಮಿ ಚಾಳುಕ್ಯ ದೊರೆ ಮಂಗಳೇಶನು ಬಾದಾಮಿಯಲ್ಲಿ ಪ್ರಸಿದ್ಧವಾದ ವೈಷ್ಣವ ಗುಹಾಂತಕ ದೇವಾಲಯವನ್ನು ಕೊರೆಯಿಸಿದನೆಂದು ಕ್ರಿ.ಶ. ೮೭೬ರ ಬಾದಾಮಿ ಬಂಡೆಗಲ್ಲು ಶಾಸನದಿಂದ ಖಚಿತವಾಗುತ್ತದೆ.[೨೧] ಇದರಿಂದ ಕ್ರಿ.ಶ. ೬ನೇ ಶತಮಾನದಲ್ಲಿ ವೈಷ್ಣವ ಧರ್ಮ ಕರ್ನಾಟಕದಲ್ಲಿ

ಜನಪ್ರೀಯ ಧರ್ಮವಾಗಿತ್ತೆಂದು ತಿಳಿದು ಬರುತ್ತದೆ. ಇಂತಹ ಪ್ರಾಚೀನ ಇತಿಹಾಸವನ್ನು ಹೊಂದಿದ ವೈಷ್ಣವ ಧರ್ಮವು ಹುಕ್ಕೇರಿ ಪ್ರದೇಶದಲ್ಲಿತ್ತೆಂಬುದಕ್ಕೆ ಅಲ್ಲಲ್ಲಿ ದೊರೆತಂತಹ ಆಕರಗಳು, ವಿಷ್ಣುವಿನ ಮೂರ್ತಿಶಿಲ್ಪಗಳು, ನಾರಾಯಣ ಶಿಲ್ಪಗಳು ಸಾಕ್ಷಿಗಳಾಗಿವೆ. ಆದರೆ ಈ ಪ್ರದೇಶದಲ್ಲಿ ಬೆರಳೆಣಿಕೆಯಷ್ಟು ಮಾತ್ರ ವೈಷ್ಣವ ದೇವಾಲಯಗಳು ಕಂಡು ಬರುತ್ತವೆ.

ವೈಷ್ಣವ ಧರ್ಮದ ಪ್ರತಿಪಾದಕರಾದ ಮಹಾಜನಗಳು ಅಂದಿನ ಸಮಾಜದಲ್ಲಿ ವಿಶಿಷ್ಠ ಸ್ಥಾನ ಪಡೆದಿದ್ದರು. ಇವರ ಉಪಜೀವನಕ್ಕಾಗಿ ರಾಜರು, ಸಾಮಂತರು, ಇತರ ಅಧಿಕಾರಿಗಳು ಗ್ರಾಮಗಳನ್ನು, ಭೂಮಿಯನ್ನು ದತ್ತಿ ನೀಡಿ ಅವುಗಳ ಧಾರ್ಮಿಕ ರಾಜಕೀಯ ಆಡಳಿತವನ್ನು ವಹಿಸಿಕೊಡುತ್ತಿದ್ದರು. ಅವು ಅಗ್ರಹಾರಗಳೆನಿಸಿದವು. ಕ್ರಿ.ಶ. ೯೭೩ರ ಬೆಳವಿ ಶಾಸನದಲ್ಲಿ ರಟ್ಟರ ದೊರೆ ಮಹಾಮಂತ ಅಂಕರಸನು ಬೆಳವಿ ಅಗ್ರಹಾರವನ್ನು ನಡೆಸಿಕೊಂಡು ಹೋಗಲಿಕ್ಕೆ ೫೦ ಮಹಾಜನ(ಬ್ರಾಹ್ಮಣ)ರಿಗೆ ಹಣ ನೀಡಿದನೆಂದು ಉಲ್ಲೇಖವಿದೆ.[೨೨]

ಕ್ರಿ.ಶ. ೧೧೭೯ರ ಅಮ್ಮಣಗಿ ರಾಮಲಿಂಗೇಶ್ವರ ದೇವಾಲಯದ ಹತ್ತಿರ ನಿಲ್ಲಿಸಲಾದ ಈ ಶಾಸನ ಇದರಲ್ಲಿ ಕೆಲವು ಮಹಾಜನರು ಕೂಡಿಕೊಂಡು ದೇವಾಲಯದ ಪೂಜೆ–ಪುನಸ್ಕಾರಕ್ಕಾಗಿ ಭೂಮಿಯನ್ನು ಖರೀದಿಸಿದರೆಂದು ಉಲ್ಲೇಖವಿದೆ.[೨೩] ಈ ಶಾಸನಗಳಿಂದ ಹಾಗೂ ಹುಕ್ಕೇರಿ ಪ್ರದೇಶದಲ್ಲಿ ಕಂಡು ಬರುವ ವೀರನಾರಾಯಣ ದೇವಾಲಯ, ಸಂಕೇಶ್ವರ ಯಮಕನಮರಡಿಯ ವೇಣುಗೋಪಾಲ ಗುಡಿ ಹಾಗೂ ಅರ್ಜುನವಾಡದ ವೆಂಕಟರಮಣ ದೇವಾಲಯ ಹಾಗೂ ಹಲವು ಗ್ರಾಮಗಳಲ್ಲಿ ದೊರೆತ ವಿಷ್ಣುವಿನ ಮೂರ್ತಿಶಿಲ್ಪಗಳಿಂದ ಈ ಪ್ರದೇಶದಲ್ಲಿ ವೈಷ್ಣವ ಧರ್ಮ ನೆಲೆಸಿತ್ತೆಂದು ಖಚಿತಪಡಿಸಿಕೊಳ್ಳಬಹುದು.

### ಇ. ಮುಸ್ಲಿಂ ಧರ್ಮ

ಮಹಮ್ಮದೀಯ ಅರಸರ ಕಾಲದಲ್ಲಿ ವಿಶೇಷವಾಗಿ ೧೬ ಮತ್ತು ೧೭ನೆಯ ಶತಮಾನದಲ್ಲಿ ನಗರದಲ್ಲಿರುವ ಬಹುತೇಕ ಮಸೀದಿಗಳು ನಿರ್ಮಾಣವಾಗಿವೆಯೆಂದು ತಿಳಿದು ಬರುತ್ತದೆ. ಹುಕ್ಕೇರಿಯಲ್ಲಿ ಸುನ್ನಿ ಪಂಗಡಕ್ಕೆ ಸೇರಿದ ಮುಸ್ಲಿಂರು ಹೆಚ್ಚಾಗಿ ಕಂಡುಬರುತ್ತಾರೆ. ಈ ಪ್ರದೇಶದಲ್ಲಿ ಹೆಚ್ಚಾಗಿ ಮಸೀದಿ ಮತ್ತು ದರ್ಗಾಗಳು ಕಂಡು ಬರುತ್ತವೆ ಮತ್ತು ಹುಕ್ಕೇರಿ, ಪಾಶ್ಚಾಪುರ, ಗಜಬರವಾಡಿ ಇವು ಮುಸ್ಲಿಂ ಧರ್ಮದ ಪ್ರಮುಖ ಸ್ಥಳವಾಗಿದ್ದವು ಎಂದು ಹೇಳಬಹುದು ಮತ್ತು ಇವರ ಕಾಲದಲ್ಲಿ ಕಾರಂಜಿಗಳು ವಿಶೇಷವಾಗಿ ಕಂಡುಬರುತ್ತವೆ. ಒಟ್ಟಿನಲ್ಲಿ ಹೇಳುವುದಾದರೆ ಹುಕ್ಕೇರಿ ಪ್ರದೇಶವು ಸರ್ವಧರ್ಮಗಳ ಆಶ್ರಯದ ತಾಣವಾಗಿತ್ತೆಂದು ಹೇಳಬಹುದು. ಈ ಎಲ್ಲ ಮತಗಳು ಈ ಪ್ರದೇಶದಲ್ಲಿದ್ದವು ಎಂಬುದಕ್ಕೆ ಈಗಲೂ ಅಳಿದುಳಿದು ನಿಂತಿರುವ ಸ್ಮಾರಕ ಶಿಲ್ಪಗಳೇ ಸಾಕ್ಷಿಗಳಾಗಿವೆ.

## IV ಶಿಕ್ಷಣ ಮತ್ತು ಸಾಹಿತ್ಯ

ಪ್ರಾಚೀನ ಕಾಲದಲ್ಲಿ ಶಿಕ್ಷಣ ಪದ್ಧತಿಯು ಬಹುಪಾಲು ಧಾರ್ಮಿಕವಾದುದು ನಮ್ಮ ನಾಡಿನ ವೈಶಿಷ್ಟಪೂರ್ಣ ಸಂಸ್ಕೃತಿಯನ್ನು ರೂಪಿಸಿದ ಸಾಧನೆಗಳಲ್ಲಿ ಶಿಕ್ಷಣವು ಒಂದು. ದಾನಗಳಲ್ಲಿ ಶ್ರೇಷ್ಠವಾದುದು ವಿದ್ಯಾದಾನ. ವಿದ್ಯಾಹೀನನಾದವನು ಪಶುವಿಗೆ ಸಮಾನ ಎಂದು ಪ್ರಾಚೀನ ಕಾಲದ ಜನರು ನಂಬಿದ್ದರು. ರಾಜಮನೆತನದವರು, ಮಹಾಸಾಮಂತರು, ಇತರ ಅಧಿಕಾರಿಗಳು ವಿದ್ಯಾಸಂಸ್ಥೆಗಳಿಗೆ ಹಲವಾರು ದತ್ತಿಗಳನ್ನು ಬಿಡುತ್ತಿದ್ದರು. ಅವುಗಳೆಂದರೆ ದೇವಾಲಯಗಳು, ಅಗ್ರಹಾರಗಳು, ಘಟಿಕಾಸ್ಥಾನ, ಬ್ರಹ್ಮಪುರಿ ಮತ್ತು ಮಠಗಳು ಇವು ಪ್ರಾಚೀನ ಮತ್ತು ಮಧ್ಯಕಾಲದಲ್ಲಿ ಶಿಕ್ಷಣ ಕೇಂದ್ರಗಳಾಗಿದ್ದವು. ಇವುಗಳಿಗೆ ದಾನ ನೀಡುವುದರಿಂದ ಪುಣ್ಯ ಲಭಿಸುವುದೆಂದು ತಿಳಿದಿದ್ದರು. ಈ ಪ್ರದೇಶದ ವಿದ್ಯಾಸಂಸ್ಥೆಗಳಿಗೆ ದಾನ ನೀಡಿದ್ದುದು ಇಲ್ಲಿ ದೊರೆತ ಶಾಸನಗಳಿಂದ ತಿಳಿದು ಬರುವುದು.

### ಅ ಅಗ್ರಹಾರಗಳು

ಅಗ್ರಹಾರಗಳು ಸಾಮಾನ್ಯವಾಗಿ ಶೈಕ್ಷಣಿಕ ಹಾಗೂ ಧಾರ್ಮಿಕ ಚಟುವಟಿಕೆಯ ಆಗರಗಳಾಗಿದ್ದವು. ಬ್ರಾಹ್ಮಣ ಮಹಾಜನಗಳಿಗೆ ರಾಜರು, ರಾಜಕುಮಾರಿಯರು, ಸಾಮಂತರು, ಇತರ ಅಧಿಕಾರಿಗಳು ವಿದ್ಯಾಕ್ಷೇತ್ರದ ಪ್ರೋತ್ಸಾಹಕ್ಕಾಗಿ ಭೂಮಿಯನ್ನು ಉಂಬಳಿಯಾಗಿ ದಾನವಾಗಿ ನೀಡುತ್ತಿದ್ದರೆಂಬ ವಿಷಯವನ್ನು ಶಾಸನಗಳಲ್ಲಿ ನೋಡುತ್ತೇವೆ.

ಪ್ರಸ್ತುತ ನನ್ನ ಅಧ್ಯಯನ ಕ್ಷೇತ್ರಕ್ಕೆ ಒಳಪಟ್ಟ ಕೆಲವು ಶಾಸನಗಳಲ್ಲಿ ಅಗ್ರಹಾರಗಳ ಬಗ್ಗೆ ತಿಳಿದು ಬಂದಿದೆ. ಉದಾ: ಹುಕ್ಕೇರಿ ಪ್ರದೇಶದ ಬೆಳವಿ ಶಾಸನದಲ್ಲಿ ರಟ್ಟರ ದೊರೆಯಾದ ಅಂಕರಸನು ಹೊರಡಿಸಿದ ಕ್ರಿ.ಶ. ೧೦೫೧ರ ಶಾಸನದಲ್ಲಿ ಬೆಳವಿ ಅಗ್ರಹಾರದಲ್ಲಿಯ ಒಂದು ಛತ್ರವನ್ನು ನಡೆಸುವದಕ್ಕೋಸ್ಕರ ಭೂಮಿಯನ್ನು ದಾನ ನೀಡಿದ್ದುದು ಉಲ್ಲೇಖವಿದೆ.[೨೪] ಅದೇ ರೀತಿ ಬೈರಾಪೂರ ಶಾಸನದಲ್ಲಿ ರಟ್ಟರ ರಾಣಿ ಲಲಿತೇದೇವಿ ತನ್ನ ಮಹಾಪ್ರಧಾನ ಸೇನಾಪತಿಗೆ ಛತ್ರವನ್ನು ನಡೆಸುವುದಕ್ಕಾಗಿ ಭೂಮಿ, ಮನೆ ಮತ್ತು ಹುಲ್ಲು ಬಣವಿ ದಾನವನ್ನಾಗಿ ನೀಡಿದ ವಿಷಯ ತಿಳಿಸುತ್ತದೆ.[೨೫] ಕೋಚರಿ ಶಾಸನದಲ್ಲಿ ತ್ರಿಕೂಟೇಶ್ವರ ದೇವಾಲಯಕ್ಕೆ ದಾನ ನೀಡಿದ ಉಲ್ಲೇಖವಿದೆ.[೨೬]

ಈ ಎಲ್ಲ ಆಧಾರಗಳಿಂದ ಹುಕ್ಕೇರಿ ಪ್ರದೇಶದಲ್ಲಿ ಅಗ್ರಹಾರಗಳು, ದೇವಾಲಯಗಳು, ವಿದ್ಯಾಕೇಂದ್ರಗಳಾಗಿದ್ದವು ಎಂಬುದು ತಿಳಿದುಬರುತ್ತದೆ.

### ಬ. ಬ್ರಹ್ಮಪುರಿಗಳು

ಬ್ರಹ್ಮಪುರಿಯು ಕೂಡಾ ಒಂದು ಪ್ರಾಚೀನ ಕಾಲದ ವಿದ್ಯಾಕೇಂದ್ರವಾಗಿತ್ತು. ನಗರಗಳಲ್ಲಿ ಅಥವಾ ಪಟ್ಟಣಗಳಲ್ಲಿ ಬ್ರಾಹ್ಮಣ ವಿದ್ವಾಂಸರು ವಾಸಿಸುವ ಭಾಗವೇ ಬ್ರಹ್ಮಪುರಿ. ಅಗ್ರಹಾರಗಳು ಊರುಗಳಾದರೆ ಬ್ರಹ್ಮಪುರಿಗಳು ಪಟ್ಟಣಗಳ ಭಾಗಗಳಾಗಿದ್ದವು. ಅಗ್ರಹಾರಗಳಿಗಿಂತ ಬ್ರಹ್ಮಪುರಿಗಳ ಸಂಖ್ಯೆ ಕಡಿಮೆ ಈ ಬ್ರಹ್ಮಪುರಿಗಳ ಬಗ್ಗೆ ಹಾಗೂ ಘಟಿಕಾಸ್ಥಾನದ ಬಗ್ಗೆ ಹುಕ್ಕೇರಿ ಪ್ರದೇಶದ ಶಾಸನಗಳಲ್ಲಿ ಉಲ್ಲೇಖವಿರುವುದಿಲ್ಲ.

### ಕ ಸಾಹಿತ್ಯ

ಹುಕ್ಕೇರಿ ಪ್ರದೇಶದ ಇತಿಹಾಸದ ಮೇಲೆ ಬೆಳಕು ಬೀರುವಂತಹ ಪ್ರಾಚೀನ ಕೃತಿಗಳು ನಮಗೆ ಲಭ್ಯವಾಗಿಲ್ಲ. ಹುಕ್ಕೇರಿ ಪ್ರದೇಶದಲ್ಲಿ ಹಲವು ರಾಜಮನೆತನಗಳು ಆಳ್ವಿಕೆ ಮಾಡಿದವು. ಅದರಲ್ಲಿ ಕೆಲವು ರಾಜರು ತಾವು ಮಾಡಿದಂತಹ ಸಾಧನೆಗಳನ್ನು ಕಲ್ಲಿನಲ್ಲಿ ಕೆತ್ತಿಸಿರುವರು. ಈ ಶಾಸನಗಳಲ್ಲಿ ರಾಜರ ಸಾಧನೆಗಳು ಮಾತ್ರ ಬಿಂಬಿಸುತ್ತವೆ ಹೊರತು ಅದನ್ನು ಕೆತ್ತಿದ ಶಿಲ್ಪಿಗಳ, ಸಾಹಿತಿಗಳ ಹಾಗೂ ಪಂಡಿತರ ಬಗ್ಗೆ ಪ್ರಸ್ತಾಪವಿಲ್ಲ. ಒಟ್ಟಿನಲ್ಲಿ ಹುಕ್ಕೇರಿ ಪ್ರದೇಶದಲ್ಲಿ ಆಳ್ವಿಕೆ ಮಾಡಿದಂತಹ ಅರಸರ ಕಾಲದಲ್ಲಿ ಕವಿಗಳು, ಸಾಹಿತಿಗಳು, ಪಂಡಿತರು ನೆಲೆಸಿದ್ದಾರೆಂದು ಹೇಳಬಹುದು.

### ಆರ್ಥಿಕ ವ್ಯವಸ್ಥೆ

ಆರ್ಥಿಕತೆಯೂ ಆ ಒಂದು ಪ್ರದೇಶದ ಅತಿ ಪ್ರಮುಖ ವ್ಯವಸ್ಥೆಯಾಗಿರುತ್ತದೆ ಮತ್ತು ಒಂದು ನಾಡಿನ ಇಲ್ಲವೇ ಪ್ರದೇಶದ ಪ್ರಗತಿಯು ಅಲ್ಲಿನ ಅರ್ಥವ್ಯವಸ್ಥೆಯನ್ನು ಅವಲಂಬಿಸಿರುತ್ತದೆ. ಅರ್ಥವ್ಯವಸ್ಥೆಯು ಮುಖ್ಯವಾಗಿ ಆ ನಾಡಿನ ಪರಿಶ್ರಮ ದುಡಿಮೆಯ ಶಕ್ತಿಯನ್ನು ಅವಲಂಬಿಸುರತ್ತದೆ ಆದರೂ ಕೈಗಾರಿಕೆ, ವ್ಯಾಪಾರ, ವಾಣಿಜ್ಯ ಮುಂತಾದವುಗಳು ಕೂಡ ಆ ಪ್ರದೇಶದ ಆರ್ಥಿಕ ಬೆಳವಣಿಗೆಗೆ ಪೂರಕವಾಗುತ್ತದೆ.

ಪ್ರಮುಖ ಅರಸು ಮನೆತನಗಳಾದ ಕದಂಬರು, ಬಾದಾಮಿ ಚಾಲುಕ್ಯರು, ಗಂಗರು, ರಾಷ್ಟ್ರಕೂಟರು ನಡೆಸಿಕೊಂಡ ಬಂದ ಆರ್ಥಿಕ ವ್ಯವಸ್ಥೆ ಹುಕ್ಕೇರಿ ಪ್ರದೇಶವನ್ನಾಳಿದ ಕಲ್ಯಾಣದ ಚಾಲುಕ್ಯರು, ಸವದತ್ತಿ ರಟ್ಟರು, ದೇವಗಿರಿಯ ಯಾದವರು ಮತ್ತು ಬಹುಮನಿ ಸುಲ್ತಾನರು ಈ ಅರ್ಥ ವ್ಯವಸ್ಥೆಯನ್ನು ಮುಂದುವರೆದುಕೊಂಡು ಬಂದವರಾಗಿದ್ದಾರೆ. ವ್ಯವಸಾಯ, ಪಶುಪಾಲನೆ, ಗೃಹಕೈಗಾರಿಕೆಗಳು ಮೊದಲಾದ ಆರ್ಥಿಕ ಅಂಶಗಳ ಕುರಿತಾದ ವಿಷಯದ ಮೇಲೆ ಹುಕ್ಕೇರಿ ಪ್ರದೇಶದ ಶಾಸನಗಳು, ಸಾಹಿತ್ಯ ಕೃತಿಗಳು ಅವುಗಳ ಮೇಲೆ ಚೆಲ್ಲುತ್ತವೆ.

### ಅ ವ್ಯವಸಾಯ

ಭಾರತದಲ್ಲಿ ಇತಿಹಾಸ ಪೂರ್ವಕಾಲದಿಂದಲೂ ಬೆಳೆದು ಬಂದ ಕೃಷಿ ಹಾಗೂ ವ್ಯವಸಾಯ ಈ ಪ್ರದೇಶದ ಜನರ ಪ್ರಮುಖ ಉದ್ಯೋಗವಾಗಿತ್ತು. ಈ ನಾಡಿನ ಬಹುಜನರು ಜೀವನೋಪಾಯಕ್ಕಾಗಿ ಕೃಷಿಯನ್ನು ಅವಲಂಬಿಸಿದ್ದರು.

ವ್ಯವಸಾಯದ ಕ್ರಮವನ್ನು ಕುರಿತಂತೆ ಈ ಪ್ರದೇಶದ ಶಾಸನಗಳು ಸ್ಪಷ್ಟವಾದ ಚಿತ್ರಣವನ್ನು ನೀಡುವುದಿಲ್ಲ. ಭೂಮಿಯನ್ನು ಅಗ್ರಹಾರಗಳಿಗೆ, ದೇವಾಲಯಗಳಿಗೆ ದಾನ ನೀಡಿರುವ ಬಗ್ಗೆ ಮಾತ್ರ ಉಲ್ಲೇಖಗಳಿವೆ. ಹುಕ್ಕೇರಿ ಪ್ರದೇಶದ ಅರ್ಜುನವಾಡ ಗ್ರಾಮದಲ್ಲಿ ಕವಿಳಾಸ ಪುರನಾದ 'ನಾಲ್ಕು ಸೀಮೆಯ'[೨೭] ಕಲ್ಲುಗಳಲ್ಲಿ ಒಂದು ಈ ಗ್ರಾಮದಲ್ಲಿ ದೊರೆತಿದೆ. ಅದರಲ್ಲಿ ಈ ರೀತಿಯಿದೆ – 'ಶ್ರೀ ಬಸವಣ ದಣ್ಣಾಯಕರ ಕೆಯ್'[೨೮] ಈ ರೀತಿ ಉಲ್ಲೇಖವಿದೆ. ಕೇಯ್[೨೮] ಎಂದರೆ ಮೂಲ ಅಂದರೆ ಬಸವಣ್ಣನವರ ವಂಶಜರ ಹೊಲದ ಸೀಮೆಯನ್ನು ಸೂಚಿಸುತ್ತದೆ. ಪ್ರಾಚೀನ ಕಾಲದಲ್ಲಿ ವ್ಯವಸಾಯಗೋಸ್ಕರ ಹೊಲವನ್ನು ಅಥವಾ ಭೂಮಿಯನ್ನು ಗುರುತಿಸಿಕೊಂಡಿದ್ದಾರೆಂದು ತಿಳಿದುಬರುವುದು (ಈಗ ಈ ಶಾಸನ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿದೆ). ಇಂದಿಗೂ ಈ ಪ್ರದೇಶದ ಜನರ ಮೂಲ ಉದ್ಯೋಗ ವ್ಯವಸಾಯವಾಗಿದೆ.[೩೦]

### ಬ ನೀರಾವರಿ

ನೀರಾವರಿಯು ಕೃಷಿಯ ಅವಿಭಾಜ್ಯ ಅಂಗವೆನಿಸಿದೆ. ಪ್ರಾಚೀನ ಕರ್ನಾಟಕದಲ್ಲಿ ನೀರಾವರಿಯು ಪ್ರಾಮುಖ್ಯತೆ ಪಡೆದಿತ್ತು. ನೀರಾವರಿಗಾಗಿ ಅನೇಕ ಕೆರೆ, ಬಾವಿ, ಕಟ್ಟೆ ಕಾರಂಜಿಗಳನ್ನು ನಿರ್ಮಿಸುತ್ತಿದ್ದರು ಮತ್ತು ನದಿ, ಹಳ್ಳಗಳನ್ನು ಸಹ ನೀರಾವರಿಗಾಗಿ ಬಳಸುತ್ತಿದ್ದಾರೆಂದು ಅವರ ಕಾಲದ ಶಾಸನಗಳು ಉಳಿದ ಅವಶೇಷಗಳಿಂದ ನಮಗೆ ತಿಳಿದು ಬರುವುದು. ಉದಾ: ಹುಕ್ಕೇರಿ ಪ್ರದೇಶದ ಅರ್ಜುನವಾಡ ಶಿಲಾ ಶಾಸನದಲ್ಲಿ 'ಕವಿಳಾಸಪುರ'ದ ಪಕ್ಕದಲ್ಲಿ ಹರಿದಿರುವ ಪಡುವಲ ತೊರೆಯ ಕೂಡಿದ ಹಳ್ಳ ಕೋಚರಿ ಹಳ್ಳ.

ಅದೇ ರೀತಿ 'ಸಾಂಖ್ಯೇಶ್ವರ ಮಹಾ ಪುರಾಣ'ದಲ್ಲಿ ಹಿರಣ್ಯಕೇಶಿ ನದಿಯನ್ನು 'ಕಶ್ಮಲಹಾ' ಎಂದು ಉಲ್ಲೇಖವಿದೆ[೩೧] ಹಾಗೂ ಮುಸ್ಲಿಂರ ಆಡಳಿತದ ಕಾಲದಲ್ಲಿ ನಿರ್ಮಾಣವಾದ ಕಾರಂಜಿಗಳು ಹುಕ್ಕೇರಿಯಲ್ಲಿ ಇಂದಿಗೂ ಕಾಣಬಹುದು. ಇಲ್ಲಿ ಉತ್ತಮ ದರ್ಜೆಯ ಗುಲಾಬಿ ಹೂಗಳನ್ನು ಬೆಳೆದು ಬಿಜಾಪುರ ದರ್ಬಾರಕ್ಕೆ ಕಳುಹಿಸುತ್ತಿದ್ದರೆಂದು ಗುಲಾಬಿ ತೋಟಗಳಿಗೆ ಕಾರಂಜಿಗಳ ಮೂಲಕ ನೀರನ್ನು ಹಾಯಿಸುತ್ತಿದ್ದರೆಂದು ತಿಳಿದು ಬರುತ್ತದೆ ಮತ್ತು ಗುಲಾಬಿ ಹೂಗಳನ್ನು ಬೆಳೆಯಲು ಪ್ರಸಿದ್ಧವಾದ ಈ ಪ್ರದೇಶವನ್ನು ಹೂವಿನ ಕೆರಿ ಎಂದು ಕರೆಯುತ್ತಿದ್ದಂತೆ ನಂತರ ಹುಕ್ಕೇರಿಯಾಗಿ ಊರಿನ ಹೆಸರಿನ ಬದಲಾವಣೆಗಳನ್ನು ಕಂಡಿದೆ. ಆದ್ದರಿಂದ ಹುಕ್ಕೇರಿಯನ್ನು ಹೂವಿನಕೇರಿ ಎಂದು ಕರೆಯುತ್ತಿದ್ದರೆಂದು ತಿಳಿದುಬರುತ್ತದೆ. ಈ ಹುಕ್ಕೇರಿಯ ಪ್ರದೇಶದಲ್ಲಿ ಹಿರಣ್ಯಕೇಶಿ, ಮಾರ್ಕಂಡೇಯ, ಘಟಪ್ರಭಾ ನದಿಗಳು ಹರಿದಿವೆ. ಇಂದಿಗೂ ಇಲ್ಲಿಯ ರೈತರಿಗೆ ಬೇಸಾಯ ಮಾಡಲು ತುಂಬಾ ಅನುಕೂಲಕರವಾಗಿದೆ.

**ಕ ಬೆಳೆಗಳು**

ಹುಕ್ಕೇರಿ ಪ್ರದೇಶವು ಹಲವಾರು ರೀತಿಯ ಬೆಳೆಗಳನ್ನು ಬೆಳೆಯುವುದಕ್ಕೆ ಅನುಕೂಲಕರವಾದ ಭೂಮಿಯನ್ನು ಹೊಂದಿದೆ ಎಂದು ಹೇಳಬಹುದು. ಈ ಭಾಗದಲ್ಲಿ ಗುಲಾಬಿ ಹೂ, ಎಲೆ, ಬಾಳೆ, ಕಬ್ಬು, ಜೋಳ, ತಂಬಾಕು, ಶೇಂಗಾ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಇಲ್ಲಿನ ಶಾಸನಗಳಲ್ಲಿ ಅನೇಕ ಧಾನ್ಯಗಳ ಉಲ್ಲೇಖವಾಗಿರುವುದನ್ನು ಕಾಣುತ್ತೇವೆ. ಅವುಗಳಲ್ಲಿ ಮುಖ್ಯವಾಗಿ, ಭತ್ತ, ಗೋಧಿ, ಸಜ್ಜೆ, ನವಣಿಗಳ ಉಲ್ಲೇಖವಿದೆ. ಅಲ್ಲದೇ ತೋಟದ ಬೆಳೆಗಳ ಬಗೆಗೆ ಸಹ ಶಾಸನಗಳಲ್ಲಿ ವಿವರಿಸಲಾಗಿದೆ.

**ಡ ಭೂ ಹಿಡುವಳಿ**

ಮಾನವನ ಸಂಪತ್ತಿನ ಸ್ಥಿತಿಗತಿ ಅವನು ಹೊಂದಿದ್ದು ಭೂಮಿಯನ್ನೇ ಅವಲಂಬಿಸಿತ್ತು. ಹೀಗಾಗಿ ಭೂ ಒಡೆತನ ಸಮಾಜದಲ್ಲಿ ಗೌರವ, ಪ್ರತಿಷ್ಠೆಗಳಿಗೆ ಕಾರಣವಾಗಿತ್ತು. ಭೂಮಿಯು ಊಳುವ ರೈತನದೇ ಅಥವಾ ರಾಜನದ್ದೇ? ಈ ವಿಷಯ ಕುರಿತು ವಿದ್ವಾಂಸರಲ್ಲಿ ಸಾಕಷ್ಟು ಚರ್ಚೆ ನಡೆದಿದೆ. ಈ ಭಾಗದಲ್ಲಿ ದೊರೆತ ಹಲವಾರು ಶಾಸನಗಳು ವ್ಯಕ್ತಿಗತವಾಗಿ ನೀಡಿದ ಬಗ್ಗೆ ಉಲ್ಲೇಖಗಳಿರುತ್ತವೆ. ದಾನವಾಗಿ ಭೂಮಿಯ ಒಡೆತನವನ್ನು ನೀಡುತ್ತಿದ್ದರು. ದಾನ ಸ್ವೀಕರಿಸಿದ ವ್ಯಕ್ತಿ ಹಾಗೂ ಸಂಸ್ಥೆಗನುಸಾರವಾಗಿ ವ್ಯಕ್ತಿಗತ ಸಂಯುಕ್ತ ಹಾಗೂ ಸಾಮೂಹಿಕ ಎಂದು ಈ ಬಗೆಯ ಭೂ ಒಡೆತನ ಇರಬಹುದೆಂದು ಎಸ್.ಕೆ. ಕೊಪ್ಪರವರು ಅಭಿಪ್ರಾಯ ಪಡುತ್ತಾರೆ.[೨೨] ಭೂಮಿಯನ್ನು ರಾಜನು ಒಬ್ಬ ಅಧಿಕಾರಿಗೆ ನೀಡಿದರೆ ಅಥವಾ ಒಬ್ಬ ಅಧಿಕಾರಿಯು ಬೇರೆ ಯಾವುದೇ ವ್ಯಕ್ತಿಗೆ ದತ್ತಿ ಬಿಟ್ಟರೆ ಹೀಗೆ ದತ್ತಿ ತೆಗೆದುಕೊಂಡು ವ್ಯಕ್ತಿ ಆ ಭೂಮಿಗೆ ಒಡೆಯನಾಗುತ್ತಾನೆ. ಹೀಗೆ ದಾನದತ್ತಿ ನೀಡಿದ ಹಲವಾರು ಉಲ್ಲೇಖಗಳು ಈ ಭಾಗದ ಶಾಸನಗಳಲ್ಲಿ ಕಂಡುಬರುತ್ತದೆ.

**ಇ ಪಶುಪಾಲನೆ**

ಪ್ರಾಚೀನ ಕಾಲದಿಂದಲೂ ಪಶುಪಾಲನೆಯ ಒಂದು ಉಪಕಸಬಾಗಿ ಆಗಿಯೇ ಮುಂದುವರೆದುಕೊಂಡು ಬಂದಿರುವ ವಿಷಯ ನಮಗೆ ಚರಿತ್ರೆಯುದ್ದಕ್ಕೂ ತಿಳಿದುಬರುತ್ತದೆ. ಪಶುಗಳನ್ನು ವ್ಯವಸಾಯ, ಸಾಗಣಿಕೆ, ಹೈನುಗಾರಿಕೆ, ಮಾಸ ಆಹಾರಕ್ಕಾಗಿ ಸಾಕುತ್ತಿದ್ದರೆಂದು ಕಂಡುಬಂದಿದೆ. ಇವುಗಳು ಮಾನವನ ಆರ್ಥಿಕ ಅಭಿವೃದ್ಧಿಗೆ ಸಹಾಯಕಾರಿಯಾಗಿದ್ದವು. ಈ ಪ್ರದೇಶದಲ್ಲಿ ವ್ಯಾಪಕವಾಗಿ ಪಾಲನೆ ಮಾಡಿದವರೆಂದರೆ ಆಕಳು, ಗೋದಾನ ಇಲ್ಲಿಯ ಶ್ರೇಷ್ಠ ಸಂಪ್ರದಾಯವಾಗಿತ್ತು. ಗೋವುಗಳನ್ನು ಅಪಹರಿಸುವುದು ಮತ್ತು ಆಯಾ ಗ್ರಾಮದ ಜನರು ಅವುಗಳನ್ನು ರಕ್ಷಿಸುವುದು ಹುಕ್ಕೇರಿ ಸುತ್ತಮುತ್ತಲಿನ ಗ್ರಾಮಗಳಲ್ಲಿ ದೊರೆತ ತುರುಗೋಳ್ ವೀರಗಲ್ಲುಗಳಿಂದ ತಿಳಿದು ಬರುವುದು ಹಾಗೂ ಇಲ್ಲಿಯ ಜನರು ಕುದುರೆ, ಎತ್ತು ಮುಂತಾದ ಪ್ರಾಣಿ–ಪಕ್ಷಿಗಳನ್ನು ಸಾಕುತ್ತಿದ್ದಾರೆಂದು ತಿಳಿದುಬಂದಿದೆ.

**ಗೃಹ ಕೈಗಾರಿಕೆಗಳು**

**ಅ ಬಟ್ಟೆ ತಯಾರಿಕೆ (ನೇಕಾರಿಕೆ)**

ಪ್ರಾಚೀನ ಕಾಲದಿಂದಲೂ ಮುಂದುವರೆದು ಬಂದ ಗೃಹ ಕೈಗಾರಿಕೆಗಳಲ್ಲಿ ಇದೂ ಒಂದು. ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಬಟ್ಟೆಯು ಒಂದು. ಹುಕ್ಕೇರಿ ಪ್ರದೇಶದ ಶಾಸನಗಳಲ್ಲಿ ಕೈಮಗ್ಗಗಳ ಬಗ್ಗೆ ಉಲ್ಲೇಖವಿಲ್ಲ. ಆದರೆ ಆ ವೃತ್ತಿಯನ್ನು ಅನುಸರಿಸಿಕೊಂಡು ಬಂದ ಜನರನ್ನು ಹಲವು ಗ್ರಾಮಗಳಲ್ಲಿ ಇಂದಿಗೂ ಕಾಣಬಹುದು. ಉದಾ: ಶೇಲಾಪುರ ಗ್ರಾಮ ಹಾಗೂ ಸುತ್ತಮುತ್ತಲಿನ ಗ್ರಾಮಗಳಲ್ಲಿ ಕೈಮಗ್ಗದಿಂದ ಬಟ್ಟೆಯನ್ನು ತಯಾರಿಸುವ ಜನ ಕಂಡುಬರುತ್ತಾರೆ.

ಬ ಕುಂಬಾರಿಕೆ

ಹುಕ್ಕೇರಿ ಪ್ರದೇಶದಲ್ಲಿ ಬೃಹತ್ ಶಿಲಾ ಸಂಸ್ಕೃತಿಗೆ ಸಂಬಂಧಪಟ್ಟ ಸುಟ್ಟ ಇಟ್ಟಿಗೆ, ಗೋಡೆಗಳು ಕೊಟಬಾಗಿ ಉತ್ತರ ಬದಿಯ ಸ್ಮಶಾನದಲ್ಲಿ ಕಂಡು ಬಂದಿದೆ ಹಾಗೂ ಅಮ್ಮಣಗಿ ಪ್ರಾಚೀನ ಬಸದಿಯ ಹತ್ತಿರ ಹಾಳು ಮಣ್ಣಿನ ಇಟ್ಟಿಗೆಗಳು ದೊರೆತಿವೆ ಮತ್ತು ಹೂನೂರು, ಹಿಡಕಲ್‌ದಲ್ಲಿ ಪ್ರಾಚೀನ ಗಡಿಗೆ, ಮಡಿಕೆಗಳು ಕಂಡು ಬಂದಿವೆ. ಇವುಗಳನ್ನು ಹಿಡಕಲ್ ಆಣೆಕಟ್ಟಿನ ಮುಖ್ಯ ಪ್ರದರ್ಶನ ಗೃಹದ ಆವಣರದಲ್ಲಿಡಲಾಗಿದೆ.[೩೩] ಇವುಗಳ ತಯಾರಿಕೆ ಮತ್ತು ಬಳಕೆ ಪ್ರಾಚೀನ ಕಾಲದಲ್ಲಿಯೂ ರೂಢಿಯಲ್ಲಿತ್ತೆಂದು ತಿಳಿದುಬರುತ್ತದೆ. ಇಂದಿಗೂ ಹಲವು ಗ್ರಾಮಗಳಲ್ಲಿ ಕಂಬಾರಿಕೆ ಕಂಡುಬರುತ್ತದೆ.

ಇನ್ನೂ ಹಲವಾರು ಗೃಹಕೈಗಾರಿಕೆಗಳಾದ ಕಮ್ಮಾರಿಕೆ, ಬಡಿಗಿತನ, ಬುಟ್ಟಿ ತಯಾರಿಸುವುದು ಮುಂತಾದವು ಉಪಕಸುಬುಗಳಾಗಿದ್ದವು ಅಂತಾ ಹೇಳಬಹುದು. ಇವುಗಳ ಬಗ್ಗೆ ತಿಳಿದು ಬಂದಿರುವುದಿಲ್ಲ. ಆದರೆ ಇಲ್ಲಿ ಆ ಜನಾಂಗ ಇರಲಿಲ್ಲವೆಂದು ಹೇಳಕ್ಕಾಗದು. ಒಟ್ಟಿನಲ್ಲಿ ಶಾಸನಗಳಲ್ಲಿ, ಸಾಹಿತ್ಯ ಕೃತಿಗಳಲ್ಲಿ ಉಲ್ಲೇಖವಾಗದೇ ಇದ್ದಿರಬಹುದು. ಪ್ರಸ್ತುತ ಹುಕ್ಕೇರಿ, ಪಾಶ್ಚಾಪುರ, ಊದಬತ್ತಿ ತಯಾರಿಕೆಯಲ್ಲಿ ಪ್ರಸಿದ್ಧಿಯನ್ನು ಪಡೆದಿರುತ್ತದೆ.

**ಅಡಿಟಿಪ್ಪಣೆಗಳು**

೧. ತರ್ದವಾಡಿ ನಾಡು ಒಂದು ಅಧ್ಯಯನ, ಪು.೧೫೧.
೨. ಪ್ರಭುತ್ವ ಮತ್ತು ಜನತೆ, ಪುಟ.
೩. ಅದೇ ಪು. ೧೫೧-೧೫೨
೪. ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ, ಪು.೬೦.
೫. ಎನ್ಯುವಲ್ ರಿಪೋರ್ಟ್ ಆನ್ ಸೌಥ್ ಇಂಡಿಯನ್ ಎಪಿಗ್ರಫಿ, ೧೯೪೨-೪೩, ಪು. ೨೬೨.
೬. ಕರ್ನಾಟಕ ಇತಿಹಾಸ ದರ್ಶನ, ಪು. ೯೬೭.
೭. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೪೩೦.
೮. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ.೪, ಭಾಗ-೧, ಪು. ೨೩.
೯. ಎ.ಆರ್.ಎಸ್.ಆಯ್.ಇ. ೧೯೪೨-೪೩, ಪು. ೨೬೧.
೧೦. ಕನ್ನಡ ವಿಷಯ ವಿಶ್ವಕೋಶ, ಮೈಸೂರು, ಪು. ೪೦೫.
೧೧. ಎಪಿಗ್ರಫಿಯಾ ಇಂಡಿಕಾ, ಸಂ. ೨೧, ಪು. ೯-೧೭.
೧೨. ಎ.ಆರ್.ಎಸ್.ಆಯ್.ಇ. ೧೯೪೨-೪೩, ಪು. ೨೬೧.
೧೩. ಕರ್ನಾಟಕ ಭಾರತಿ, ಸಂ.-೯, ಸಂಚಿಕೆ-೪, ಪು.೪.
೧೪. ಅದೇ ಪುಟ
೧೫. ಅದೇ ಪುಟ.
೧೬. ಹುಕ್ಕೇರಿ ತಾಲೂಕು ದರ್ಶನ, ಪು.೭೪.
೧೭. ಅದೇ ಪುಟ ೨೫.
೧೮. ತರ್ದವಾಡಿ ನಾಡು ಒಂದು ಅಧ್ಯಯನ, ಪು. ೨೦೮.
೧೯. ಹುಕ್ಕೇರಿ ತಾಲೂಕು ದರ್ಶನ, ಪು.೬೭.
೨೦. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು. ೬೭.
೨೧. ಅದೇ ಪುಟ ೧೨೫.
೨೨. ಅದೇ ಪುಟ
೨೩. ಅದೇ ಪುಟ
೨೪. ಎ.ಆರ್.ಎಸ್.ಆಯ್.ಇ. ೧೯೪೨-೪೩, ಪು. ೨೬೧.
೨೫. ವಚನಗಳಲ್ಲಿ ವೀರಶೈವ ಧರ್ಮ, ಪು. ೬೫.
೨೬. ಅದೇ ಪುಟ

೨೭. ಬಸವೇಶ್ವರ ಅಂಡ್ ಹಿಸ್ ಟೈಮ್ಸ್, ಪುಟ.೧೩೩
೨೮. ಕರ್ನಾಟಕ ಭಾರತಿ, ಸಂ.೯, ಸಂಚಿಕೆ ೪
೨೯. ಕರ್ನಾಟಕ ಪರಂಪರೆ, ಸಂ-೧, ಬೆಂಗಳೂರು, ಪುಟ.೨೫೮
೩೦. ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಪುಟ.೧೬೧-೧೬೨
೩೧. ಎ.ಆರ್.ಎಸ್.ಐ.ಇ. ೧೯೪೨-೪೩, ಪುಟ.೨೬೧
೩೨. ಅದೇ
೩೩. ಅದೇ
೩೪. ಎ.ಆರ್.ಎಸ್.ಐ.ಇ. ೧೯೪೧-೪೨, ಪುಟ.೨೬೧

# ಅಧ್ಯಾಯ–ನಾಲ್ಕು

## ದೇವಾಲಯ ಮತ್ತು ಮೂರ್ತಿಶಿಲ್ಪ

ಕರ್ನಾಟಕ ಇತಿಹಾಸದಲ್ಲಿ ಬೆಳಗಾವಿ ಜಿಲ್ಲೆಯ ವಿಶಿಷ್ಟವಾದ ಸ್ಥಾನವನ್ನು ಪಡೆದಿದೆ. ಬೆಳಗಾವಿ ಜಿಲ್ಲೆಯಲ್ಲಿ ಹಲವು ರಾಜಮನೆತನಗಳು ಆಳ್ವಿಕೆ ಮಾಡಿವೆ. ಅವುಗಳಲ್ಲಿ ಪ್ರಮುಖರಾದ ಶಾತವಾಹಮ, ಕದಂಬ, ಬಾದಾಮಿ ಚಾಳುಕ್ಯ, ರಾಷ್ಟ್ರಕೂಟ, ರಟ್ಟರು, ಕಲ್ಯಾಣಿ ಚಾಳುಕ್ಯರು, ವಿಜಯನಗರದ ಅರಸರು, ಬಹಮನಿ ಮತ್ತು ಬಿಜಾಪುರ ಆದಿಲ್‌ಷಾಹಿಗಳು, ಮರಾಠ ಅರಸರು, ಬ್ರಿಟೀಷರು ಮುಂತಾದವರ ಆಡಳಿತಕ್ಕೆ ವಿವಿಧ ಸಂಸ್ಕೃತಿಗಳನ್ನು ಅಳವಡಿಸಿಕೊಂಡು ತನ್ನ ಹಿರಿಮೆಯನ್ನು ಮೆರೆದಿದೆ. ಆಯಾ ರಾಜಮನೆತನಗಳ ಕಾಲದಲ್ಲಿ ಈ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ಸ್ಮಾರಕಗಳು, ದೇವಾಲಯಗಳು, ಮೂರ್ತಿ ಶಿಲ್ಪಗಳು, ನಿರ್ಮಾಣಗೊಂಡು ಆಯಾ ಕಾಲದ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಸ್ಮಾರಕಗಳಾಗಿವೆ. ಇಂತಹ ವಾಸ್ತುಶಿಲ್ಪದ ಸ್ಥಳಗಳನ್ನು ಈ ಜಿಲ್ಲೆಯ ಅನೇಕ ತಾಲೂಕು ಪ್ರದೇಶಗಳಲ್ಲಿ ಕಾಣಬಹುದು. ಹುಕ್ಕೇರಿ ಪ್ರದೇಶವು ಸಹ ಪ್ರಾಚೀನ ಕಾಲದಿಂದಲೂ ಕರ್ನಾಟಕ ಇತಿಹಾಸದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ. ಇದು ಬೆಳಗಾವಿಯ ಪಶ್ಚಿಮಕ್ಕೆ ೫೦ ಕಿ.ಮೀ. ಅಂತರದಲ್ಲಿದೆ. ಹುಕ್ಕೇರಿ ಪ್ರದೇಶವು ಅನೇಕ ರಾಜಮನೆತನಗಳ ಆಡಳಿತಕ್ಕೆ ಒಳಪಟ್ಟು ವಿವಿಧ ಧರ್ಮಗಳಿಗೆ ಸಂಬಂಧಿಸಿದ ದೇವಾಲಯಗಳು, ಸ್ಮಾರಕಗಳು, ಮಠಗಳು, ಮೂರ್ತಿಶಿಲ್ಪಗಳು, ಜೈನ ಬಸದಿಗಳು ಮುಂತಾದವುಗಳು ನಿರ್ಮಿತವಾಗಿರುವುದನ್ನು ಇಂದಿಗೂ ಕಾಣಬಹುದು. ಇದರಿಂದ ಹುಕ್ಕೇರಿ ಪ್ರದೇಶವು ಹಲವು ಮತಧರ್ಮಗಳ ಆಶ್ರಯತಾಣವಾಗಿತ್ತೆಂದು ತಿಳಿದುಬರುವದು.

ಈ ಪ್ರದೇಶದಲ್ಲಿ ಕಂಡು ಬರುವ ದೇವಾಲಯಗಳನ್ನು ಗಮನಿಸಿದಾಗ ಅವುಗಳಲ್ಲಿ ಶೈವ ದೇವಾಲಯಗಳು ಹೆಚ್ಚಾಗಿವೆ. ವೈಷ್ಣವ ಧರ್ಮಕ್ಕೆ ಸಂಬಂಧಿಸಿದ ದೇವಾಲಯಗಳಿರುವುದು ಕೇವಲ ಬೆರಳೆಣಿಕೆಯಷ್ಟು ಮಾತ್ರ ಇವೆ. ಜೈನ ಬಸದಿಗಳು ಅಲ್ಲಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಕೆಲವೊಂದು ಗ್ರಾಮಗಳಲ್ಲಿ ಜೈನ ಧರ್ಮದವರಿಲ್ಲ. ಆದರೆ ಜೈನ ಬಸದಿಗಳು, ಮೂರ್ತಿಶಿಲ್ಪಗಳು ಕಂಡು ಬಂದಿವೆ. ಈ ಪ್ರದೇಶದಲ್ಲಿ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಅವಶೇಷಗಳು ಲಭ್ಯವಾಗಿಲ್ಲ. ಹುಕ್ಕೇರಿ ಪ್ರದೇಶವು ಬಿಜಾಪೂರ ಆದಿಲ್‌ಷಾಹಿಗಳ ಆಡಳಿತಕ್ಕೆ ಒಳಪಟ್ಟಿದ್ದರಿಂದ ಇಲ್ಲಿ ಮುಸ್ಲಿಂ ಸ್ಮಾರಕಗಳು ನಿರ್ಮಾಣವಾಗಿರುವುದನ್ನು ಕಾಣಬಹುದು.

ಹುಕ್ಕೇರಿ ಪ್ರದೇಶದಲ್ಲಿ ಕ್ಷೇತ್ರ ಕಾರ್ಯ ಕೈಗೊಂಡಾಗ ಅಲ್ಲಲ್ಲಿ ಕಂಡು ಬಂದಂತಹ ಪ್ರಾಚೀನ ದೇವಾಲಯಗಳು, ಸ್ಮಾರಕಗಳು, ಕಟ್ಟಡಗಳು, ಜೈನ ಬಸದಿಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

## ಅಮ್ಮಣಗಿ

### ಪಾರ್ಶ್ವನಾಥ ಬಸದಿ

ಈ ದೇವಾಲಯವು ದಕ್ಷಿಣಾಭಿಮುಖವಾಗಿದೆ. ಸುಮಾರು ನಾಲ್ಕೈದು ಅಡಿ ತಗ್ಗಿನಲ್ಲಿರುವ ಈ ದೇವಾಲಯದ ಆವರಣವನ್ನು ಮೆಟ್ಟಿಲುಗಳ ಸಹಾಯದಿಂದ ಪ್ರವೇಶಿಸಬೇಕಾಗುತ್ತದೆ. ಸುಂದರವಾದ ಕೆತ್ತನೆಯನ್ನು ಹೊಂದಿರುವ ಈ ಸ್ಮಾರಕವು ಗರ್ಭಗೃಹ, ಅಂತರಾಳ, ನವರಂಗ ಹಾಗೂ ಪ್ರವೇಶ ಮಂಟಪಗಳನ್ನು ಹೊಂದಿದೆ. ಈ ಪರಿಸರದಲ್ಲಿ ಸಿಗುವ ಅಪರೂಪದ ದೇವಾಲಯ ಇದಾಗಿದೆ. ಕಾರಣ ಪ್ರಾಚೀನವಾದ ಕದಂಬ–ನಾಗರ ಅಥವ ಫಂಸಾನ ಮಾದರಿಯ ಶಿಖರವನ್ನು ಈ ವರೆಗೂ ಉಳಿಸಿಕೊಂಡು ಬಂದಿರುವ ಏಕಮಾತ್ರ ದೇವಾಲಯ ಇದಾಗಿದೆ ಎಂದು ಅಭಿಪ್ರಾಯಿಸಬಹುದು. ಹತ್ತರಗಿ, ಸಂಕೇಶ್ವರ, ಸುಲ್ತಾನಪುರ, ಬೆಲ್ಲದ ಬಾಗೇವಾಡಿ ಹಾಗೂ ಪಾಚ್ಚಾಪುರ ಗ್ರಾಮಗಳಲ್ಲಿರುವ ದೇವಾಲಯಗಳು ಸಹ ಇದೇ ಮಾದರಿಯ ಶಿಖರವನ್ನು ಹೊಂದಿದ್ದಿರಬಹುದು. ಆದರೆ ಅವುಗಳ ಶಿಖರಗಳು ಕ್ಷೀಣಗೊಂಡಿವೆ. ಅಥವ ಹೊಸದಾಗಿ ನವೀಕರಣಗೊಂಡು ಅದೇ ಮಾದರಿಯನ್ನು ಉಳಿಸಿಕೊಂಡಿವೆ.

ಚೌಕಾಕಾರದ ಗರ್ಭಗೃಹದಲ್ಲಿ ಎತ್ತರವಾದ ಪೀಠವಿದೆ. ಪೀಠದಲ್ಲಿ ಸಿಂಹ ಲಾಂಛನವಿದೆ. ಆದರೆ ಸದ್ಯ ಪೀಠದಲ್ಲಿ ಸುಮಾರು ನಾಲ್ಕು ಅಡಿಯ ಪಾರ್ಶ್ವನಾಥನ ವಿಗ್ರಹವಿದೆ. ಈ ಪೀಠವನ್ನು ಗಮನಿಸಿದಾಗ ಬಹುಶಃ ಈ ಮೊದಲು ಇಲ್ಲಿ ಆದಿನಾಥ ತೀರ್ಥಂಕರನ ವಿಗ್ರಹ ಇದ್ದಿರಬಹುದಾದ ಸಾಧ್ಯತೆಗಳಿವೆ. ಆದರೆ ಇಂದು ಬದಲಾವಣೆಗೊಂಡು ಪಾರ್ಶ್ವನಾಥನ ಮೂರ್ತಿಯು ಅನಾವರಣಗೊಂಡಿದೆ. ಗರ್ಭಗೃಹದ ಬಾಗಿಲವಾಡವು ಸರಳ ರಚನೆಯಿಂದ ಕೂಡಿದ್ದು ಲಲಾಟದಲ್ಲಿ ಪದ್ಮಾಸನದಲ್ಲಿ ಕುಳಿತ ಜಿನ ಬಿಂಬವಿದೆ. ಬಾಗಿಲವಾಡದ ಉತ್ತರಾಂಗ ಭಾಗದಲ್ಲಿ ದ್ರಾವಿಡ ಮಾದರಿಯ ಶಿಖರ ಪಟ್ಟಿಕೆಗಳನ್ನು ರಚಿಸಲಾಗಿದೆ.

ಅಂತರಾಳವು ಬರಿದಾಗಿದ್ದು ಅದರ ಬಾಗಿಲವಾಡದ ಶಾಖೆಗಳು ಬೇರೆ ಬೇರೆ ನಮೂನೆಯಿಂದ ಕೂಡಿವೆ. ಒಂದು ಶಾಖೆಯು ನಕ್ಷತ್ರಾಕಾರ ಪಟ್ಟಿಕೆಯನ್ನು ಹೊಂದಿದೆ. ಇನ್ನೊಂದನ್ನು ಚಿಕ್ಕಸ್ತಂಭಗಳ ಅಲಂಕರಣೆಯಿಂದ ಕೂಡಿದ ಕೆತ್ತನೆಯ ವಿವರಗಳಿವೆ. ಅಂತರಾಳದ ಬಾಗಿಲವಾಡದ ಇಕ್ಕೆಲಗಳಲ್ಲಿ ನಕ್ಷತ್ರಾಕಾರದ ಅಲಂಕರಣೆವುಳ್ಳ ಜಾಲಾಂಧರಗಳನ್ನು ಅಳವಡಿಸಲಾಗಿದೆ. ಅಂತರಾಳದಲ್ಲಿ ಭುವನೇಶ್ವರಿಯ ಕೆತ್ತನೆಯಿದೆ.

ನವರಂಗದಲ್ಲಿ ಕೋಷ್ಟಕಗಳಿದ್ದು ಅವುಗಳಲ್ಲಿ ಬಿಡಿಶಿಲ್ಪಗಳನ್ನು ಇಡಲಾಗಿದೆ. ಸಿಂಹಾರೂಢಳಾದ ಜ್ವಾಲಾಮಾಲಿನಿ ವಿಗ್ರಹ ಎಡಗಡೆಯ ಕೋಷ್ಟಕದಲ್ಲಿದ್ದರೆ ಬಲಗಡೆಯ ಕೋಷ್ಠಕದಲ್ಲಿ ಕ್ಷೇತ್ರಪಾಲನ ವಿಗ್ರಹ ಇಡಲಾಗಿದೆ. ನವರಂಗದಲ್ಲಿರುವ ನಾಲ್ಕು ಕಂಬಗಳು ಉಪಾನ(ಪಾದ) ಗೋಡೆ, ದಂಡ, ದಂಡಾಗ್ರ, ಕಲಶ, ವೃತ್ತಫಲಕ ಹಾಗೂ ಬೋಧಿಗೆಗಳನ್ನು ಹೊಂದಿವೆ. ದಂಡ ಮತ್ತು

ದಂಡಾಗ್ರ ಭಾಗದಲ್ಲಿ ಕೆತ್ತನೆಗಳನ್ನು ಮಾಡಲಾಗಿದೆ. ಇದೇ ತರಹದ ಕಂಬಗಳು ಹುಕ್ಕೇರಿ ತಾಲೂಕಿನ ಬೇರೆ ಬೇರೆ ಗ್ರಾಮಗಳಲ್ಲಿ ನಿರ್ಮಾಣವಾಗಿರುವ ದೇವಾಲಯಗಳಲ್ಲಿಯೂ ಕಂಡುಬರುತ್ತವೆ. ಉದಾಃ ಸಂಕೇಶ್ವರ, ಪಾಚ್ಛಾಪೂರ ಹಾಗೂ ಕೋಚರಿ ಗ್ರಾಮಗಳಲ್ಲಿರುವ ದೇವಾಲಯಗಳಲ್ಲಿ ಇದೇ ಮಾದರಿಯ ಕಂಬಗಳಿವೆ.

ನವರಂಗದಲ್ಲಿರುವ ನಾಲ್ಕು ಕಂಬಗಳನ್ನೊಳಗೊಂಡ ಸುಂದರವಾದ ಭುವನೇಶ್ವರಿಯ ಕೆತ್ತನೆಯನ್ನು ನವರಂಗದ ಛತ್ತಿನಲ್ಲಿ ಕಾಣುತ್ತೇವೆ. ಇದು ನಕ್ಷತ್ರಾಕಾರದ ಕೆತ್ತನೆಯನ್ನು ಹೊಂದಿದೆ. ನವರಂಗದ ಬಾಗಿಲವಾಡವು ಕೆಲವು ಅಲಂಕರಣೆಗಳಿಂದ ಕೂಡಿದೆ. ಬಾಗಿಲವಾಡದ ಶಾಖೆಗಳಲ್ಲಿ ಅರ್ಧಕಂಬ ಪಟ್ಟಿಕೆಯನ್ನು ಕೆತ್ತಲಾಗಿದ್ದು, ಅದನ್ನು ತೋರಣಕಂಬದಂತೆ ಅಲಂಕರಣೆ ಮಾಡಲಾಗಿವೆ. ಅಲ್ಲದೇ ಇದೇ ಶಾಖೆಗಳಲ್ಲಿ ಚಿಕ್ಕ ಹಾಗೂ ಸೂಕ್ಷ್ಮವಾದ ಕೆತ್ತನೆಗಳನ್ನು ಮಾಡಲಾಗಿದೆ. ಲತಾಬಳ್ಳಿ ಸುರಳಿ, ಪುಷ್ಪ ಪಟ್ಟಿಕೆ ಹಾಗೂ ಮಣಿಸರದ ಪಟ್ಟಿಕೆಯನ್ನು ಬಾಗಿಲವಾಡದ ಸುತ್ತಲೂ ಕೆತ್ತಲಾಗಿದೆ. ಬಾಗಿಲವಾಡ ಉತ್ತರಾಂಗ ಭಾಗದಲ್ಲಿ ವಿವಿಧ ಶಿಖರ ಪಟ್ಟಿಕೆಗಳನ್ನು ಅಥವಾ ಪ್ರತಿಕೃತಿಗಳನ್ನು ಸುಂದರವಾಗಿ ಬಿಡಿಸಲಾಗಿದೆ. ಉತ್ತರಾಂಗವು ಸ್ವಲ್ಪ ಮುಂಚಾಚಿದ್ದು ಅದು ಮಂಜೂರಿನಂತೆ ಕಾಣುತ್ತದೆ. ಲಲಾಟದಲ್ಲಿ ಪದ್ಮಾಸನ ರೂಢನಾದ ಜಿನ ಬಿಂಬಿವನ್ನು ಕೆತ್ತಲಾಗಿದೆ.

ನವರಂಗದ ಬಾಗಿಲವಾಡದ ಇಕ್ಕೆಲುಗಳಲ್ಲಿ ಅರ್ಧಕಂಬಗಳ ರಚನೆಯಿದ್ದು ಅವುಗಳ ಕಲಶ ಭಾಗದಲ್ಲಿ ತ್ರಿಕೋನ ಪಟ್ಟಿಕೆಯ ರಚನೆಯನ್ನು ಚಿತ್ರಿಸಲಾಗಿದೆ. ಈ ಅರ್ಧಕಂಬದ ದಂಡಾಗ್ರ ಭಾಗದಲ್ಲಿ ಚೌಕಾಕರದ ಹಾಗೂ ವೃತ್ತಾಕಾರದ ಅರ್ಧಪಟ್ಟಿಕೆಗಳನ್ನು ಸಹ ಕೆತ್ತಲಾಗಿದೆ. ಅಮ್ಮಣಗಿಯ ಪಾರ್ಶ್ವನಾಥ ಬಸದಿಯ ಬಾಗಿಲವಾಡ ರಚನೆ ಹಾಗೂ ಹತ್ತರಗಿ, ಸಂಕೇಶ್ವರ ಹಾಗೂ ಕೋಚರಿ ಗ್ರಾಮಗಳಲ್ಲಿರುವ ದೇವಾಲಯಗಳ ಬಾಗಿಲವಾಡಗಳು ಯಥಾ ನಕಲಿನಂತೆ ಭಾಸವಾಗುತ್ತವೆ. ಬಹುಶಃ ಈ ಪ್ರದೇಶದಲ್ಲಿರುವ ದೇವಾಲಯಗಳು ಒಂದೇ ಕಾಲದಲ್ಲಿ ಹಾಗೂ ಒಬ್ಬನೇ ಶಿಲ್ಪಗಾರನಿಂದ ರಚಿತವಾದವುಗಳೇ ಎಂದು ಭಾಸವಾಗುತ್ತವೆ. ಒಂದೇ ಅಭಿರುಚಿ ಹೊಂದಿದ್ದ ಕಲಾಶಾಖೆಯ ಕರ್ತೃಗಳು ಈ ಭಾಗದಲ್ಲಿ ದೇವಾಲಯಗಳನ್ನು ನಿರ್ಮಿಸಿದ್ದಿರಬಹುದೆಂದು ಅಭಿಪ್ರಾಯಿಸಬಹುದು.

ಈ ದೇವಾಲಯಕ್ಕೆ ಕಕ್ಷಾಸನ ಇದೆ. ಇದರಲ್ಲಿ ಅರ್ಧಕಂಬಗಳನ್ನು ಅಳವಡಿಸಲಾಗಿದೆ. ಇವು ಚೌಕಾಕಾರದವು. ಅವುಗಳಲ್ಲಿ ವೃತ್ತಾಕಾರದ, ತಟ್ಟೆ ಆಕಾರದ ಫಲಕ ಹಾಗೂ ಬೋಧಿಗೆಯನ್ನು ಅಳವಡಿಸಲಾಗಿದೆ. ಕಕ್ಷಾಸನದ ಹೊರಗೋಡೆಯ ಭಾಗದಲ್ಲಿ ಪುಷ್ಪಪಟ್ಟಿಕೆಯ ಅಲಂಕರಣೆಯನ್ನು ಮಾಡಲಾಗಿದೆ.

ದೇವಾಲಯವು ಅಧಿಷ್ಠಾನ, ಭಿತ್ತಿ, ಪ್ರಸ್ತರ, ಶಿಖರ, ಸ್ತೂಪಿ ಮತ್ತು ಕಲಶದ ಭಾಗಗಳನ್ನು ಹೊಂದಿದೆ. ಅಧಿಷ್ಠಾನವು ಉಪಾನ, ತ್ರಿಪಟ್ಟಿ, ಕುಮುದ, ಗಳ, ಕಪೋತ ಭಾಗಗಳನ್ನು ಹೊಂದಿದೆ. ಅದರ ಭಿತ್ತಿಯ ಭಾಗವು ಅಲಂಕರಣೆಯಿಂದ ಕೂಡಿದ್ದು ಭಿತ್ತಿಯಲ್ಲಿ ಸುತ್ತಲೂ ಪುಷ್ಪಪಟ್ಟಿಕೆಯ ಪಟ್ಟಿಯನ್ನು ಕಂಡರಿಸಲಾಗಿದೆ. ಅಲ್ಲದೇ ಅದರಲ್ಲಿ ಚಿಕ್ಕ ಚಿಕ್ಕ ಪುಷ್ಪಾಲಂಕರಣೆಯನ್ನು ಮಾಡಲಾಗಿದೆ. ಹೀಗಾಗಿ ಗೋಡೆಯ ಭಾಗವು ಸುಂದರವಾಗಿ ಕಾಣುತ್ತದೆ. ಪ್ರಸ್ತರ ಭಾಗವು

ಭಾಗಶಃ ಸವೆದು ಹೋಗಿದ್ದರಿಂದ ಅದರಲ್ಲಿರುವ ಭಾಗಗಳನ್ನು ಸ್ಪಷ್ಟವಾಗಿ ಗುರುತಿಸಲಿಕ್ಕಾಗದು. ದೇವಾಲಯದ ಶಿಖರ ಭಾಗವು ಫಂಸಾನ ಅಥವ ಕದಂಬನಾಗರ ಮಾದರಿಯದ್ದು. ಪಿರಾಮಿಡ್ ಆಕಾರದ ಈ ಶಿಖರದಲ್ಲಿ ಸ್ತೂಪಿ ಮತ್ತು ಕಲಶ ಭಾಗಗಳು ಇನ್ನು ಉಳಿದುಕೊಂಡಿವೆ. ಶಿಖರ ಭಾಗದಲ್ಲಿ ಸುಖನಾಸವು ಅತ್ಯಂತ ಸ್ಪಷ್ಟವಾಗಿ ಹಾಗೂ ದೊಡ್ಡದಾಗಿ ಮಾಡಲಾಗಿದ್ದು, ಅದರಲ್ಲಿ ಜಿನಬಿಂಬವನ್ನು ಅಳವಡಿಸಲಾಗಿದೆ. ಇಡೀ ದೇವಾಲಯಕ್ಕೆ ಕಪ್ಪು ಬಣ್ಣ ಬಳಿಯಲಾಗಿದ್ದರಿಂದ ಅದರ ಮೂಲ ಸೌಂದರ್ಯಕ್ಕೆ ಸ್ವಲ್ಪಮಟ್ಟಿನ ಚ್ಯುತಿಯಾದಂತೆ ಕಾಣುತ್ತದೆ. ಪ್ರಾಚೀನ ಗುಡಿಯ ಭಗ್ನಾವಶೇಷಗಳನ್ನು ಸಹ ಆವರಣದಲ್ಲಿಯೇ ಇಡಲಾಗಿದೆ. ತೃಟಿತವಾದ ಕೀರ್ತಿಮುಖ ಫಲಕವಿದ್ದು ಅದರಲ್ಲಿ ಖಡ್ಗಾಸನದಲ್ಲಿರುವ ತೀರ್ಥಂಕರನ ಬಿಂಬವನ್ನು ಕಾಣುತ್ತೇವೆ.

ಈ ದೇವಾಲಯವು ಮಣ್ಣಿನಲ್ಲಿ ಹೂತುಹೋಗಿತ್ತು. ೧೯೫೫ರಲ್ಲಿ ಇದರ ಹೂಳನ್ನು ತೆಗೆಯಲಾಗಿ ಇಲ್ಲೊಂದು ಸುಂದರ ದೇವಾಲಯದ ಪ್ರತ್ಯಕ್ಷಿಕೆ ಆಯಿತು. ಈ ಗ್ರಾಮಕ್ಕೆ ಸಂಬಂಧಿಸಿದ ಎರಡು ಶಾಸನಗಳು ಪ್ರಕಟವಾಗಿವೆ. ಕದಂಬ ಅರಸ ಶಾಂತಿವರ್ಮನ ಭೋಜ ತಾಮ್ರಪಟ ಶಾಸನದಲ್ಲಿ ಈ ಗ್ರಾಮವನ್ನು 'ಅಮ್ಮಣಿಕಾ' ಎಂದು ಸಂಬೋಧಿಸಲಾಗಿದೆ. ಅಲ್ಲದೇ ಇದೇ ದೇವಾಲಯದಲ್ಲಿರುವ ಶಾಸನದ ಉಲ್ಲೇಖದನ್ವಯ ಮೂಲ ಸಂಘಮೂಲದಲ್ಲಿ ಪ್ರಸಿದ್ಧವಾದ ಸೂರಸ್ತಗಣದ ಶ್ರೀನಂದಿ ಭಟ್ಟಾರಕರನ್ನು ಉಲ್ಲೇಖಿಸಿರುವ ಸಂಗತಿ ತಿಳಿದುಬರುತ್ತದೆ. ಅಲ್ಲದೇ ಅಮಣಗೆ ಯಾರು ಎಂದು ಈ ಗ್ರಾಮವನ್ನು ಉಲ್ಲೇಖಿಸಲಾಗಿದೆ. ಈ ಶಾಸನದ ಕಾಲ ಕ್ರಿ.ಶ.೧೧ನೇ ಶತಮಾನವೆಂದು ಗುರುತಿಸಲಾಗಿದೆ.

**ಮಲ್ಲಿಕಾರ್ಜುನ**

ಪೂರ್ವಾಭಿಮುಖವಾಗಿರುವ ಈ ದೇವಾಲಯವು ೧೮-೧೯ನೇ ಶತಮಾನದಲ್ಲಿ ಕಟ್ಟಲ್ಪಟ್ಟಿದ್ದರೂ ಇದರ ಜೊತೆಗೆ ಅತ್ಯಂತ ಪ್ರಾಚೀನಪೂರ್ವ ಇತಿಹಾಸದ ಜೊತೆಗಿನ ಸಂಬಂಧಗಳನ್ನು ಸ್ಥಳೀಯರು ಸ್ಥಾಪಿಸಿದ್ದಾರೆ. ವಿಶಾಲವಾದ ಪ್ರಾಂಗಣ ಈ ದೇವಾಲಯಕ್ಕಿದೆ. ಗ್ರಾಮದಿಂದ ಸುಮಾರು ಒಂದು ಮೈಲಿ ದೂರದಲ್ಲಿರುವ ಈ ದೇವಾಲಯಕ್ಕೆ ಹೊಸದಾದ ಎತ್ತರವಾದ ಶಿಖರ ಕಟ್ಟಲಾಗಿದೆ. ಆಯತಾಕಾರದ ತಲವಿನ್ಯಾಸವನ್ನು ಹೊಂದಿರುವ ಈ ಸ್ಮಾರಕವು ಗರ್ಭಗೃಹ, ಅಂತರಾಳ ಹಾಗೂ ನವರಂಗ ಅಥವಾ ಮಂಟಪವನ್ನು ಹೊಂದಿದೆ. ಗರ್ಭಗೃಹ ಹಾಗೂ ಅಂತರಾಳ ಅತಿ ಚಿಕ್ಕದಾಗಿದೆ. ಗರ್ಭಗೃಹದಲ್ಲಿ ಎರಡು ಭಾಗಗಳನ್ನು ಮಾಡಲಾಗಿದೆ. ಈ ದೇವಾಲಯದ ವಿವರಗಳು ಸಂಪೂರ್ಣವಾಗಿ ಶ್ರೀಶೈಲ ಮಲ್ಲಿಕಾರ್ಜುನನ ಜೊತೆಗೆ ಮೇಳೈಸಿಕೊಂಡಿವೆ. ಈ ಗುಡಿಯ ಆವರಣದಲ್ಲಿ ಚಿಕ್ಕ-ಪುಟ್ಟ ಗುಡಿಗಳು ಹಾಗೂ ತಕ್ಕಮಟ್ಟಿಗೆ ವಿಶಾಲವಾದ ಬಾವಿ ಅಥವ ಹೊಂಡವಿದೆ. ಇದರಲ್ಲಿ ಸದಾಕಾಲ ನೀರು ನಿಂತಿರುತ್ತದೆ. ದೇವಾಲಯ ಬಹುತೇಕ ರಚನಾ ವಿನ್ಯಾಸವು ಇಂಡೋ-ಇಸ್ಲಾಮಿಕ್ ಶೈಲಿಯ ಲಕ್ಷಣಗಳನ್ನು ಹೊಂದಿದೆ. ಎತ್ತರವಾದ ದೀಪಸ್ತಂಭ ಆಕರ್ಷಕವಾಗಿದೆ.

ದೇವಾಲಯದ ನಿರ್ಮಾಣಕ್ಕೆ ಐತಿಹ್ಯ ಒಂದಿದ್ದು ಇದೇ ಗ್ರಾಮದ ಸಮೀಪ ಇರುವ ಹಂದಿಗೂಡದ ಹುದ್ದಾರ ಮನೆತನದ ಪೂರ್ವಜರ ಆಕಳೊಂದು ಮೇಯಲು ಬಂದಾಗ ಇಲ್ಲಿರುವ ಹುತ್ತಕ್ಕೆ ಹಾಲುಣಿಸುತ್ತಿತ್ತು. ಇಂಥ ವಿಶೇಷ ಸಂಗತಿ ಕಂಡು ಗ್ರಾಮಸ್ಥರು ಹುತ್ತನ್ನು

ಬಗೆದಾಗ ಅವರಿಗೊಂದು ಆಶ್ಚರ್ಯ ಕಾದಿತ್ತು. ಅಲ್ಲೊಂದು ಲಿಂಗವಿತ್ತು. ಅದು ಶ್ರೀಶೈಲ ಮಲ್ಲಿಕಾರ್ಜುನನಿಗೆ ಸಂಬಂಧಿಸಿದ್ದೆಂದು ಜನರು ನಂಬಿ ಪೂಜಿಸಲಾರಂಭಿಸಿದರು. ಅದೇ ಸ್ಥಳದಲ್ಲಿ ಮುಂದೆ ಇಂಥದೊಂದು ದೇವಾಲಯವು ನಿರ್ಮಾಣವಾಯಿತು ಎಂದು ವಿವರ ದಾಖಲಾಗಿದೆ. ಇಂಥ ಐತಿಹ್ಯದ ಕಥೆಗಳು ಕರ್ನಾಟಕದ ಅನೇಕ ಗ್ರಾಮಗಳಲ್ಲಿ ದಾಖಲಾಗಿರುವುದನ್ನು ಕಾಣುತ್ತೇವೆ. ಇಂಥ ವಿವರಗಳ ಸಾಧ್ಯಸಾಧ್ಯತೆ ಏನೇ ಇರಲಿ ಸಂಬಂಧಿಸಿದ ಆ ಪರಿಸರದಲ್ಲಿ ಒಂದು ನವೀನವಾದ ಸಂಪ್ರದಾಯವು ಪ್ರವೇಶಿಸಿ ಸ್ಥಳೀಯರನ್ನು ಆಕರ್ಷಿಸಿದ ಸಂಗತಿಗಳು ನಮಗೆ ಮುಖ್ಯವಾಗುತ್ತವೆ. ಈ ಪ್ರದೇಶದಿಂದ ಬಹುದೂರದ ಶ್ರೀಶೈಲ ಸಂಪ್ರದಾಯ ಈ ಬಗೆಯಲ್ಲಿ ಈ ಪರಿಸರವನ್ನು ಪ್ರವೇಶಿಸಲು ಸಫಲವಾಯಿತು. ಈ ಗುಡಿಗೆ ಸಂಬಂಧಿಸಿದಂತೆ ಎಲ್ಲ ಪೂಜಾಸಂಪ್ರದಾಯಗಳಲ್ಲಿ ಪ್ರತಿವರ್ಷವು ಸಂಕ್ರಮಣದಂದು ಜರುಗುವ ಹಬ್ಬದಲ್ಲಿ ಈ ದೇವಾಲಯದ ಪರಿಸರದಲ್ಲಿನ ಹೆಚ್ಚಿನ ಗ್ರಾಮಗಳು ತಮ್ಮ ಹಕ್ಕುದಾರಿಕೆಯೊಂದಿಗೆ ಇಂಥ ಕಂಕೈರ್ಯದಲ್ಲಿ ಪಾಲ್ಗೊಳ್ಳುವುದು ವಿಶೇಷ. ಇಂಥ ಸಂಗತಿಗಳನ್ನು ಇತಿಹಾಸದ ಪ್ರಕ್ರಿಯೆಯಾಗಿ ನೋಡುವ ಅಗತ್ಯದ ಹಿನ್ನಲೆಯಲ್ಲಿ ಈ ವಿವರ ಬರೆಯಲಾಗಿದೆ.

**ಹತ್ತರಗಿ**

**ಶಿಖರೇಶ್ವರ**

ಪೂನಾ-ಬೆಂಗಳೂರು ರಾಷ್ಟ್ರೀಯ ಹೆದ್ದಾರಿಗೆ ಹೊಂದಿಕೊಂಡಂತಿರುವ ಹತ್ತರಗಿ ಗ್ರಾಮದಲ್ಲಿ ಈ ದೇವಾಲಯವಿದೆ. ಕ್ರಿ.ಶ.೧೨ನೇ ಶತಮಾನದಲ್ಲಿ ನಿರ್ಮಾಣವಾಗಿದ್ದಿರಬಹುದಾದ ಈ ಸ್ಮಾರಕವು ದೇವಾಲಯಗಳ ಅಧ್ಯಯನದಲ್ಲಿ ಪ್ರಮುಖ ಸ್ಥಾನವನ್ನು ಹೊಂದಿದೆ. ಕಾರಣ ಇದಕ್ಕಿರುವ ಮೇಲ್ಕಟ್ಟಡ ಅಥವ ಶಿಖರ ವಿಮಾನ ನಾಗರ ಮಾದರಿಯ ಶಿಖರವನ್ನು ಹೊಂದಿರುವ ಕೆಲವೇ ಕೆಲವು ದೇವಾಲಯಗಳಲ್ಲಿ ಇದು ಒಂದು. ಇದೇ ಮಾದರಿಯ ಶಿಖರ ಹೊಂದಿರುವ ಇನ್ನೊಂದು ದೇವಾಲಯವು ಹಾನಗಲ್ ಪಟ್ಟಣದ (ಹಾವೇರಿ ಜಿಲ್ಲೆಯ)ಲ್ಲಿ ಇದೆ. ಗಣಪತಿ ಎಂಬ ಹೆಸರಿನ ಸ್ಮಾರಕವು ಸಹ ಇಂಥದ್ದೇ ಶಿಖರವನ್ನು ಒಳಗೊಂಡಿದೆ.

ತ್ರಿಕೂಟ ರಚನಾ ವಿನ್ಯಾಸವನ್ನು ಇದು ಹೊಂದಿದೆ. ಆದರೆ ಪಶ್ಚಿಮಾಭಿಮುಖವಾಗಿದ್ದ ಗರ್ಭಗೃಹವನ್ನು ಶಾಶ್ವತವಾಗಿ ಮುಚ್ಚಲಾಗಿದೆ. ಇದಕ್ಕೆ ಸ್ಪಷ್ಟವಾದ ಕಾರಣಗಳು ತಿಳಿದುಬಂದಿಲ್ಲ. ಪ್ರಸ್ತುತ ಉತ್ತರಾಭಿಮುಖ ಹಾಗೂ ಪೂರ್ವಾಭಿಮುಖವಾಗಿರುವ ಗರ್ಭಗೃಹಗಳು ಮಾತ್ರ ಉಳಿದುಕೊಂಡಿವೆ. ಅದರಲ್ಲೂ ಪೂರ್ವಾಭಿಮುಖ ಗರ್ಭಗೃಹ ಹಾಗೂ ಅಂತರಾಳವು ಬರಿದಾಗಿವೆ. ಇದೇ ದೇವಾಲಯದ ಪ್ರಾಚೀನ ಅವಶೇಷಗಳನ್ನು ಪೂರ್ವಾಭಿಮುಖ ಗರ್ಭಗೃಹದಲ್ಲಿ ಇಡಲಾಗಿದೆ. ಉತ್ತರಾಭಿಮುಖ ಗರ್ಭಗೃಹದಲ್ಲಿ ಲಿಂಗವನ್ನಿಡಲಾಗಿದ್ದು ಅದರಲ್ಲಿರುವ ರುದ್ರಭಾಗವು ಸಹ ಇತ್ತೀಚೆಗೆ ರಚನೆಯಾಗಿರುವಂಥದ್ದು. ಅದರ ಪಾಣಿ ಪೀಠಭಾಗವು ಪ್ರಾಚೀನ ಎಂಬುದರಲ್ಲಿ

ಯಾವ ಅನುಮಾನಗಳಿಲ್ಲ. ಉತ್ತರಾಭಿಮುಖವಾಗಿರುವ ಈ ದೇವಾಲಯದಲ್ಲಿ ನಿತ್ಯವು ಪೂಜೆ ಪುನಸ್ಕಾರಗಳು ನಡೆಯುತ್ತಿವೆ.

ಮುಖ್ಯಗರ್ಭಗೃಹದ ಬಾಗಿಲವಾಡವು ಅಲಂಕರಣೆಯಿಂದ ಕೂಡಿದೆ. ಇದರಲ್ಲಿ ಅರ್ಧವೃತ್ತಾಕಾರದ ಮಣಿಸರಗಳ ಕೆತ್ತನೆಯನ್ನು ಹಾಗೂ ಪುಷ್ಪಕಟ್ಟಿಯನ್ನು ಕಂಡರಿಸಲಾಗಿದೆ. ಬಾಗಿಲವಾಡದ ಉತ್ತರಾಂಗವನ್ನು ಮುಂಚಾಚಿದಂತೆ ಮಾಡಲಾಗಿದ್ದು, ಅದು ತೋರಣದಂತೆ ಕಾಣುತ್ತದೆ. ಅಲ್ಲದೇ ಅದರಲ್ಲಿ ಸಿಲಂಡರಿನಾಕಾರದ ಚಿಕ್ಕ ಚಿಕ್ಕ ಪಟ್ಟಿಕೆಗಳನ್ನು ನಿರ್ಮಿಸಲಾಗಿದೆ. ಲಲಾಟದ ಭಾಗವು ಬರಿದಾಗಿದೆ. ಮುಖ್ಯಗರ್ಭದ ಅಂತರಾಳದ ಬಾಗಿಲವಾಡವು ಗರ್ಭಗೃಹದ ಬಾಗಿಲವಾಡದಂತೆ ಅಲಂಕರಣೆಯನ್ನು ಹೊಂದಿದೆ. ಗರ್ಭಗೃಹ ಹಾಗೂ ಅಂತರಾಳಗಳಲ್ಲಿ ಕಮಲಪುಷ್ಪ ರಚನೆಯ ಭುವನೇಶ್ವರಿಯನ್ನು ಕೆತ್ತಲಾಗಿದೆ. ಅವು ಜಾಲಂಧರವನ್ನು ಅಳವಡಿಸಲಾಗಿದ್ದು ಈ ಜಾಲಂಧರಗಳ ಇಕ್ಕೆಲಗಳಲ್ಲಿ ಚೌಕಾಕಾರದ ಅರ್ಧಕಂಬಗಳನ್ನು ಕಾಣುತ್ತೇವೆ.

ನವರಂಗವು ತಕ್ಕಮಟ್ಟಿಗೆ ವಿಶಾಲವಾಗಿದ್ದು ಅದರಲ್ಲಿ ಕಲ್ಯಾಣದ ಚಾಲುಕ್ಯ ಕಾಲದ ಹಾಗೂ ಆ ಮಾದರಿಯ ನಾಲ್ಕು ಕಂಬಗಳು ಇವೆ. ಇವು ಚೌಕಾಕಾರದವುಗಳು. ಪೀಠ, ಪಾದ, ಗೋಡೆ, ಕಲಶ ಹಾಗೂ ಘಟಕ ಭಾಗಗಳನ್ನು ಹೊಂದಿವೆ. ಈ ಕಂಬಗಳು ಪಾದ ಭಾಗದಲ್ಲಿ ಚೌಕಾಕಾರದವುಗಳಾಗಿದ್ದು ಈ ಚೌಕಾಕಾರದ ಮೇಲ್ಭಾಗದಲ್ಲಿ ವೃತ್ತಾಕಾರವನ್ನು ಹೊಂದಿವೆ. ಈ ವೃತ್ತಾಕಾರದಲ್ಲಿ ಹದಿನಾರು ಪಟ್ಟಿಕೆಗಳನ್ನು ರಚಿಸಲಾಗಿದೆ. ಕಂಬಗಳಲ್ಲಿರುವ ಕಲಶ ಮತ್ತು ಗಳ, ಭಾಗಗಳು ಸಾದಾ ರಚನೆಯಿಂದ ಕೂಡಿವೆ. ಕಂಬಗಳಲ್ಲಿ ವೃತ್ತಾಕಾರದ ಫಲಕ ಹಾಗೂ ಚೌಕಾಕಾರದ ಬೋಧಿಗೆಗಳನ್ನು ಅಳವಡಿಸಲಾಗಿದೆ. ಈ ನಾಲ್ಕು ಕಂಬಗಳನ್ನೊಳಗೊಂಡು ಛತ್ತಿನ ಭಾಗದಲ್ಲಿ ಕಮಲಪುಷ್ಪ ಮಾದರಿಯ ಭುವನೇಶ್ವರಿಯನ್ನು ಕೆತ್ತಲಾಗಿದೆ. ಭುವನೇಶ್ವರಿಯ ಭಾಗವು ಸಪಾಟಾಗಿದ್ದು, ಮಧ್ಯ ಭಾಗದಲ್ಲಿ ಇಳಿ ಬಿದ್ದ ಮೊಗ್ಗಿನ ಆಕಾರದ ರಚನೆಯನ್ನು ಸುಂದರವಾಗಿ ಕೆತ್ತಲಾಗಿದೆ.

ನವರಂಗದಲ್ಲಿ ಆರು ಕೋಷ್ಠಕ ಅಥವಾ ಗೂಡುಗಳಿವೆ. ಅವುಗಳಲ್ಲಿ ಐದು ಬರಿದಾಗಿವೆ. ಒಂದರಲ್ಲಿ ನಾಗದೇವತೆಯ ಶಿಲ್ಪವನ್ನಿಡಲಾಗಿದೆ. ಈ ಕೋಷ್ಠಕಗಳನ್ನು ಅರ್ಧಕಂಬ ಹಾಗೂ ಶಿಖರ ಪಟ್ಟಿಕೆಯಿಂದ ಅಂದಗೊಳಿಸಲಾಗಿದೆ. ನವರಂಗದಲ್ಲಿ ಇನ್ನೆರಡು ಕೋಷ್ಠಕಗಳಿದ್ದಿರಬಹುದು. ಆದರೆ ಅವು ಕಾರಣಾಂತರಗಳಿಂದ ಗೋಡೆಯಲ್ಲಿ ಸೇರಿಹೋಗಿವೆ. ಪಶ್ಚಿಮಾಭಿಮುಖ ಗರ್ಭಗೃಹ ಹಾಗೂ ಅಳಿದುಳಿದ ಪ್ರಾಚ್ಯಾವಶೇಷಗಳನ್ನು ಇಡಲಾಗಿದ್ದು, ಅದು ಸಹ ಕ್ಷೀಣಿಸುವ ಹಂತಕ್ಕೆ ಬಂದು ತಲುಪಿವೆ. ಪೂರ್ವಾಭಿಮುಖ ಗರ್ಭಗೃಹದ ಬಾಗಿಲವಾಡವು ಸಹ ಉತ್ತರಾಭಿಮುಖ ಗರ್ಭಗೃಹದ ಬಾಗಿಲವಾಡದಂತೆ ಅಲಂಕರಣೆಯನ್ನು ಹೊಂದಿದೆ. ಮುಖ್ಯ ಗರ್ಭಗೃಹಕ್ಕೆ ಜೋಡಿಸಿರುವ ಜಾಲಂಧರವು ವೃತ್ತಾಕಾರದ್ದಾಗಿದ್ದರೆ ಪೂರ್ವಾಭಿಮುಖ ಗರ್ಭಗೃಹದ ಬಾಗಿಲವಾಡದ ಇಕ್ಕೆಲಗಳಲ್ಲಿ ಜೋಡಿಸಿದ ಜಾಲಂಧರವು ಪುಷ್ಪ ಪಟ್ಟಿಕೆಯನ್ನು ಹೊಂದಿರುವುದು.

ದೇವಾಲಯದ ಹೊರಗೋಡೆಯು ಸಾದಾ ರಚನೆಯಿಂದ ಕೂಡಿದೆ. ಅಲ್ಲದೇ ಅಧಿಷ್ಠಾನ ಭಾಗವು ಭಾಗಶಃ ಮಣ್ಣಿನಲ್ಲಿ ಹೂತುಹೋಗಿದೆ. ಆದ್ದರಿಂದ ಅದರಲ್ಲಿರುವ ಭಾಗಗಳನ್ನು ಸಹ ಸ್ಪಷ್ಟವಾಗಿ ಗುರುತಿಸಲಿಕ್ಕಾಗದು. ಕೆಲವು ಕಡೆಗೆ ಅಸ್ಪಷ್ಟವಾದ ಅಧಿಷ್ಠಾನದ ಭಾಗವು ಕಾಣುತ್ತದೆ.

ದೇವಾಲಯದ ಪ್ರಸ್ತರ ಭಾಗದಲ್ಲಿ ಕಪೋತ ಮತ್ತು ಗಳ ಭಾಗಗಳಿವೆ. ಶಿಖರ ಭಾಗದ ಮೂರು ಕಡೆಗೆ ಚೈತ್ಯ ಅಥವಾ ಕೂಡುಗಳಿವೆ. ಇದರ ಕಲಶ ಮತ್ತು ಸ್ತೂಪಿ ಭಾಗವು ಬಿದ್ದುಹೋಗಿವೆ. ಅಲ್ಲದೇ ಶಿಖರಕ್ಕಿದ್ದ ಸುಖನಾಸಿಯು ಹಾಳಾಗಿದೆ. ಶಿಖರ ಭಾಗವು ವಿಮಾನ ನಾಗರ ಮಾದರಿಯದೆಂದು ಗುರುತಿಸಲಾಗಿದೆ. ವಿಮಾನ ನಾಗರ ರೀತಿಯ ಶಿಖರದಲ್ಲಿ ಅನೇಕ ಶಿಖರಗಳಿರುತ್ತವೆ. ಅಂದರೆ ಮಧ್ಯೆ ಎತ್ತರವಾದ ಒಂದು ಶಿಖರವಿದ್ದು(ಮೂಲಶೃಂಗ) ಅದಕ್ಕೆ ಒತ್ತಿಕೊಂಡಂತೆ ಅದರ ಸುತ್ತ ಅದಕ್ಕಿಂತಲೂ ಚಿಕ್ಕದಾದ ಶಿಖರಗಳಿರುತ್ತವೆ. ಮೂಲೆಗಳಲ್ಲಿ ಇಂತಹ ಶಿಖರಗಳಿರುತ್ತವೆ(ಕರ್ಣಶೃಂಗ). ಈ ಚಿಕ್ಕ ಶಿಖರಗಳು ಹಂತಹಂತವಾಗಿ ಮೇಲೇರುತ್ತಾ ಹೋದಂತೆ ದೊಡ್ಡದಾಗಿರುವಂತೆ ರಚಿಸಲ್ಪಟ್ಟಿದ್ದರೂ, ಮಧ್ಯದ ಶಿಖರವು(ಮೂಲಶೃಂಗ) ಎಲ್ಲದಕ್ಕಿಂತ ಎತ್ತರವಾಗಿರುತ್ತದೆ(ದೇವಾಲಯ ವಾಸ್ತುಶಿಲ್ಪ, ಪುಟ.೬೪).

ಈ ಮಾದರಿಯ ಶಿಖರ ಶೈಲಿಯ ದೇವಾಲಯಗಳು ಅತ್ಯಂತ ವಿರಳ ಸಂಖ್ಯೆಯಲ್ಲಿವೆ. ಇಡೀ ಉತ್ತರ ಕರ್ನಾಟಕದ ಭಾಗದಲ್ಲಿ ಇಂತಹ ಶಿಖರ ಮಾದರಿಯ ಎರಡು ದೇವಾಲಯಗಳನ್ನು ಮಾತ್ರ ಈವರೆಗೂ ಗುರುತಿಸಲಾಗಿದೆ. ಹತ್ತರಗಿಯ ಶಿಖರೇಶ್ವರ ದೇವಾಲಯ ಮತ್ತು ಹಾವೇರಿ ಜಿಲ್ಲೆಯ ಹಾನಗಲ್ ಪಟ್ಟಣದಲ್ಲಿರುವ ಗಣಪತಿಯ ದೇವಾಲಯ ಇದಕ್ಕೆ ಪೂರಕ ಸಾಕ್ಷಿಗಳಾಗಿವೆ. ಇಂಥ ದೇವಾಲಯಗಳ ಕುರಿತು ವಿದ್ವಾಂಸರಾದ ಡಾ.ದೇವರಕೊಂಡಾರೆಡ್ಡಿ ಅವರು ಓರಿಸ್ಸಾದಲ್ಲಿರುವ ದೇವಾಲಯಗಳ ಪ್ರಭಾವ ಈ ನಾಡಿನ ದೇವಾಲಯದ ಮೇಲೆ ಆಗಿರುವ ಸಾಧ್ಯತೆಗಳಿವೆ ಎಂದು ಅಭಿಪ್ರಾಯಿಸುತ್ತಾರೆ(ಹಾನಗಲ್ ಎಂಬ ವಿಚಾರ ಸಂಕಿರಣ ಗೋಷ್ಠಿ ಅಧ್ಯಕ್ಷತೆ, ೨೦೧೦). ಆದರೆ ವಿದ್ವಾಂಸರಾದ ಡಾ.ಶ್ರೀನಿವಾಸ ಪಾಡಿಗಾರ ಅವರು ಇಂಥ ಪ್ರಯೋಗಗಳು ಇದೇ ನಾಡಿನಲ್ಲಿ ರೂಪಾಂತರಗೊಂಡಿವೆ ಎಂದು ಅಭಿಪ್ರಾಯಿಸುತ್ತಾರೆ(ಹಾನಗಲ್, ಪುಟ.೮೭-೧೦೦). ವಿಶೇಷ ಮಾದರಿಯ ಇಂಥ ರಚನೆಯನ್ನು ಹೊಂದಿರುವ ಈ ಗ್ರಾಮಕ್ಕೆ ಸಂಬಂಧಿಸಿದ ಶಾಸನ ಮಾಹಿತಿ ಅಥವಾ ಇನ್ನಿತರೆ ನಂಬಬಹುದಾಗಿರುವ ಸಾಕ್ಷಿಗಳು ಈವರೆಗೂ ದೊರೆತಿಲ್ಲ.

**ಕಲ್ಮೇಶ್ವರ**

ಗ್ರಾಮದ ಮಧ್ಯಭಾಗದಲ್ಲಿರುವ ಈ ದೇವಾಲಯವು ಕ್ರಿ.ಶ.೧೨ನೇ ಶತಮಾನದಲ್ಲಿ ನಿರ್ಮಾಣವಾಗಿದ್ದಿರಬಹುದು. ಆದರೆ ಕಾಲಕಾಲಕ್ಕೆ ಅನೇಕ ಮಾರ್ಪಾಟುಗಳಿಗೆ ಒಳಗಾಗಿದೆ. ತಗ್ಗಿನಲ್ಲಿರುವ ಈ ದೇವಾಲಯವು ಒಂದು ವಿಶಾಲ ಮಂಟಪದಂತೆ ಕಂಡುಬರುತ್ತದೆ. ಗರ್ಭಗೃಹ, ಅಂತರಾಳ ಹಾಗೂ ನವರಂಗವನ್ನು ಹೊಂದಿದೆ. ಗರ್ಭಗೃಹದ ಬಾಗಿಲವಾಡವು ಸಾದಾ ರಚನೆಯಿಂದ ಕೂಡಿದ್ದು ಅದರ ಲಲಾಟವು ಬರಿದಾಗಿದೆ. ಅಂತರಾಳದ ಬಾಗಿಲವಾಡವು ಅರ್ಧಕಂಬಗಳ ಪಟ್ಟಿಕೆ ಹಾಗೂ ಇಕ್ಕೆಲುಗಳಲ್ಲಿ ಜಾಲಂಧರ ಪಟ್ಟಿಕೆಯನ್ನು ಹೊಂದಿವೆ. ಈ

ಜಾಲಂಧ್ರಗಳಿಗೆ ಹೊಂದಿಕೊಂಡಂತೆ ಚತುಸ್ರಾಕಾರದ ಕಂಬಗಳನ್ನು ಅಳವಡಿಸಲಾಗಿದೆ. ಬಾಗಿಲವಾಡದ ಉತ್ತರಾಂಗದಲ್ಲಿ ಶಿಖರಪಟ್ಟಿಕೆಗಳನ್ನು ಕೆತ್ತಲಾಗಿದ್ದು ಈ ಶಿಖರ ಪಟ್ಟಿಕೆಗಳ ಮಧ್ಯದಲ್ಲಿ ಪುಷ್ಪಗಳನ್ನು ಸಹ ಕೆತ್ತಲಾಗಿದೆ.

ನವರಂಗವು ಬರಿದಾಗಿದೆ. ಅಲ್ಲದೇ ಅದರ ಛಾವಣಿಯು ಸಹ ಕುಸಿದಿದ್ದು, ಅವಶೇಷಗಳನ್ನು ಗುಡಿಯ ಆವರಣದಲ್ಲಿಯೇ ಇಡಲಾಗಿದೆ. ನವರಂಗದಲ್ಲಿ ಚತುಸ್ರಾಕಾರದ ಕಂಬಗಳಿದ್ದವು. ಅವುಗಳಲ್ಲಿ ಪಾದ(ಉಪಾನ)ಗೋಡೆ ಹಾಗೂ ದಂಡ ಭಾಗಗಳನ್ನು ಕೆತ್ತಲಾಗಿದೆ. ಕಂಬಗಳ ದಂಡ ಭಾಗದಲ್ಲಿ ವೃತ್ತ ಪಟ್ಟಿಕೆಗಳನ್ನು ಕೊರೆಯಲಾಗಿದೆ. ಹೊರ ಗೋಡೆಯು ಸಾದಾ ರಚನೆಯವುಗಳು. ಅಲ್ಲದೇ ಇದೇ ಹೊರಗೋಡೆಯಲ್ಲಿ ಮಾಸ್ತಿಕಲ್ಲೊಂದನ್ನು ಅಳವಡಿಸಲಾಗಿದೆ. ಆದರೆ ಅದು ಸಹ ಮಣ್ಣಿನಿಂದ ಆವೃತವಾಗಿದ್ದು ಅದರ ಕೆಲವು ಭಾಗಗಳು ಮಾತ್ರ ಕಂಡು ಬರುತ್ತವೆ.

**ಪರಮೇಶ್ವರ ದೇವಾಲಯ**

ಕಲ್ಮೇಶ್ವರ ದೇವಾಲಯದ ಪಕ್ಕದಲ್ಲಿಯೇ ಇರುವ ಈ ಸ್ಮಾರಕವು ಪ್ರಾಚೀನ ಕಾಲದ ನಿರ್ಮಿತಿ ಎಂಬುದರಲ್ಲಿ ಯಾವ ಅನುಮಾನಗಳಿಲ್ಲ. ಆದರೆ ಅದನ್ನು ಸಹ ಹೆಚ್ಚಿನ ಬದಲಾವಣೆಗೆ ಈಡುಮಾಡಲಾಗಿದೆ. ಸದ್ಯ ಗರ್ಭಗೃಹ ಹಾಗೂ ಆಯತಾಕಾರದಲ್ಲಿರುವ ವಿಶಾಲವಾದ ಮಂಟಪ ಮಾತ್ರ ಇದಕ್ಕಿದೆ. ಈ ಗುಡಿಯ ಸುತ್ತಲೂ ಅದೇ ದೇವಾಲಯದ ಪ್ರಾಚ್ಯಾವಶೇಷಗಳು ಅನಾಥವಾಗಿ ಬಿದ್ದಿವೆ.

**ಬ್ರಹ್ಮದೇವರು**

ಮೂಲತಹ ಇದೊಂದು ಕ್ಷೇತ್ರಪಾಲ ದೇವತೆ. ಬಹುಶಃ ಇದು ಜೈನ ಮತಪಂಥಕ್ಕೆ ಸೇರಿದ ಯಕ್ಷಿಯ ಶಿಲ್ಪ ಇದ್ದಿರಬಹುದು. ಕಾರಣಾಂತರಗಳಿಂದ ಅದು ನಾಶವಾಗಿ ಹೋಗಿದೆ. ಹಾಗಾಗಿ ಅದೇ ಸ್ಥಳದಲ್ಲಿರುವ ಹುಟ್ಟುಬಂಡೆಯನ್ನೆ ಬ್ರಹ್ಮದೇವರೆಂದು ಹೆಸರಿಸಿ ಜನ ಪೂಜಿಸುತ್ತಾರೆ. ಸದ್ಯ ಈ ದೇವಾಲಯದ ಪೂಜೆ ಪುನಾಸ್ಕಾರಗಳನ್ನು ಜೈನ ಮತ ಧರ್ಮಕ್ಕೆ ಸಂಬಂಧಿಸಿದ ಸಮುದಾಯವೇ ನೋಡಿಕೊಳ್ಳುತ್ತದೆ.

**ವೀರಭದ್ರ**

ಗ್ರಾಮದ ಹೊರಭಾಗದಲ್ಲಿರುವ ಈ ದೇವಾಲಯವು ಇತ್ತೀಚೆಗೆ ನಿರ್ಮಾಣವಾಗಿದೆ. ಆದರೆ ಈ ಮೊದಲು ಇಲ್ಲೊಂದು ದೇವಾಲಯವಿತ್ತೆಂಬುದು ಅನುಮಾನದ ಸಂಗತಿಗಳಾಗಿ ಉಳಿದುಕೊಳ್ಳುತ್ತವೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಗರ್ಭಗೃಹ ಹಾಗೂ ವಿಶಾಲವಾದ ನವರಂಗವನ್ನು ಹೊಂದಿದೆ. ಪ್ರಸ್ತುತ ಈ ಗುಡಿಯ ಎಲ್ಲ ಭಾಗಗಳನ್ನು ದುರಸ್ತಿಗೊಳಿಸಿ ಅಂದವನ್ನು ಹೆಚ್ಚಿಸಲಾಗಿದೆ. ಆವರಣದಲ್ಲಿ ಸೂರ್ಯನ ಸುಂದರವಾದ ಶಿಲ್ಪ, ವೀರಗಲ್ಲು, ಗಣಪತಿ ಹಾಗೂ ನಾಗದೇವತೆಯ ಶಿಲ್ಪಗಳು ಮನಸೆಳೆಯುತ್ತವೆ.

ಇದೇ ಗುಡಿಯ ಬಲಭಾಗಕ್ಕೆ ಮೂಕಪ್ಪನ ದೇವಾಲಯವಿದೆ. ಇದು ಬಹುಶಃ ತುಂಬಾ ಪ್ರಸಿದ್ಧ ಹಾಗೂ ವಿಶಾಲವಾದ ದೇವಾಲಯವಾಗಿದ್ದಿರಬಹುದು. ಎತ್ತರದ ಕಟ್ಟೆಯ ಮೇಲೆ ನಿರ್ಮಾಣವಾಗಿದ್ದಿರಬಹುದಾದ ಈ ದೇವಾಲಯವು ತ್ರಿಕೂಟ ರಚನೆ. ಆದರೆ ಸದ್ಯ ಒಂದು

ತೃಟಿತಗೊಂಡು ನಿಂತಿರುವ ಗರ್ಭಗೃಹವನ್ನು ಬಿಟ್ಟು ಯಾವುದೇ ಭಾಗಗಳು ಉಳಿದುಕೊಂಡು ಬಂದಿಲ್ಲ. ಆದರೆ ಅದರ ಸ್ಪಷ್ಟ ಕುರುಹುಗಳು ಮೇಲ್ನೋಟದಲ್ಲಿಯೇ ಕಂಡುಬರುತ್ತವೆ. ಬಹುಶಃ ಇದು ೧೧-೧೨ನೇ ಶತಮಾನದಲ್ಲಿ ರಚನೆಯಾಗಿದ್ದಿರಬಹುದು. ಉಳಿದುಕೊಂಡಿರುವ ಗರ್ಭಗೃಹದಲ್ಲಿ ಕಲ್ಯಾಣದ ಚಾಲುಕ್ಯ ಹಾಗೂ ಆ ಶೈಲಿಯನ್ನು ಪ್ರತಿನಿಧಿಸುವ ತೃಟಿತವಾದ ಲಿಂಗವು ಮಾತ್ರ ಉಳಿದುಕೊಂಡಿದೆ.

**ಯಮಕನಮರಡಿ**

**ವೇಣುಗೋಪಾಲ**

ಇದು ಸುಮಾರು ೧೬ ರಿಂದ ೧೭ನೇ ಶತಮಾನದ ಕಾಲಾವಧಿಯಲ್ಲಿ ನಿರ್ಮಾಣವಾಗಿದ್ದಿರಬಹುದು. ಪೂರ್ವಾಭಿಮುಖವಾಗಿರುವ ಈ ಸ್ಮಾರಕವನ್ನು ಸ್ಥಳೀಯವಾಗಿ ಸಿಗುವ ಕಗ್ಗಲ್ಲಿನಲ್ಲಿಯಲ್ಲಿ ಕಟ್ಟಲಾಗಿದೆ. ಗರ್ಭಗೃಹ ಹಾಗೂ ವಿಶಾಲವಾದ ಮಂಟಪ ಇದಕ್ಕಿದೆ. ಗರ್ಭಗೃಹವನ್ನು ಮಾತ್ರ ಕಲ್ಲಿನಲ್ಲಿ ಕಟ್ಟಲಾಗಿದ್ದು ಸಭಾಮಂಟಪವನ್ನು ಇಟ್ಟಿಗೆ ಹಾಗೂ ಗಚ್ಚಿನಿಂದ ಮಾಡಲಾಗಿದೆ. ಇದಕ್ಕೆ ವೇಸರ ಶೈಲಿಯ ಶಿಖರವಿದೆ. ಇದು ಸಹ ಗಾರೆ-ಗಚ್ಚಿನಲ್ಲಿಯೇ ಕಟ್ಟಿರುವಂತದ್ದು. ಗರ್ಭಗೃಹದಲ್ಲಿ ಸುಮಾರು ೩ ಅಡಿ ಎತ್ತರವಿರುವ ಸಮಭಂಗಿಯಲ್ಲಿರುವ ವೇಣುಗೋಪಾಲನ ಶಿಲ್ಪವಿದೆ.

**ಐದು ದೇವರಗುಡಿ**

ಗ್ರಾಮದ ಹಳ್ಳದ ದಂಡೆಯ ಮೇಲಿರುವ ಈ ಗುಡಿಗಳಿಗೆ ವಿಶಾಲವಾದ ಸಂಕೀರ್ಣವನ್ನು ನಿರ್ಮಿಸಲಾಗಿದೆ. ಬಹುಶಃ ಇವು ಪಂಚಾಯತನದ ದೇವಾಲಯಗಳು ಆಗಿರಬಹುದು. ಇದೇ ಆವರಣದಲ್ಲಿ ಪ್ರಾಚೀನ ಪ್ರಸಿದ್ಧವಾದ ಸ್ಮಾರಕಗಳು ಇದ್ದಿರಬಹುದು. ಆದರೆ ಅವು ಕಾರಣಾಂತರಗಳಿಂದ ನಾಶಗೊಂಡ ನಂತರ ಅದೇ ಸ್ಥಳದಲ್ಲಿ ಹೊಸದಾಗಿ ಬೇರೆ ಬೇರೆ ಹೆಸರಿನಿಂದ ದೇವಾಲಯಗಳನ್ನು ಕಟ್ಟಲಾಗಿದೆ. ಸದ್ಯ ಅವು ವೈಷ್ಣವ ಮತಪಂಥಕ್ಕೆ ಸೇರಿದವುಗಳಾಗಿದ್ದು, ಅದೇ ಪಂಥದ ಪೂಜಾಪದ್ಧತಿಗಳು ನಿರ್ವಹಿಸಲಾಗುತ್ತದೆ. ಇಲ್ಲಿರುವ ನಾಲ್ಕು ಗುಡಿಗಳು ನಾಲ್ಕು ಕಡೆಗೆ ಮುಖಮಾಡಿವೆ. ಶಾಖಂಬರಿ ಹೆಸರಿನ ದೇವಾಲಯವು ಮಾತ್ರ ಪೂರ್ವಾಭಿಮುಖವಾಗಿದೆ. ಹಾಗೂ ಇದರಲ್ಲಿ ಕುಳಿತ ಭಂಗಿಯಲ್ಲಿರುವ ಚಾಮುಂಡಿಯ ಶಿಲ್ಪವನ್ನು ಇಡಲಾಗಿದೆ. ಅವು ಸಹ ಆರ್ವಾಚೀನವಾದುದು. ಇಲ್ಲಿರುವ ಐದು ದೇವಾಲಯಗಳಿಗೆ ಶಿಖರಗಳನ್ನು ನಿರ್ಮಿಸಲಾಗಿದ್ದು, ಅವು ವೇಸರ, ದ್ರಾವಿಡ, ನಾಗರ ಹಾಗೂ ಕದಂಬ ನಾಗರ ಅಥವ ಫಂಸಾನ ಮಾದರಿಯ ಶಿಖರಗಳನ್ನು ಹೊಂದಿವೆ. ಈ ದೇವಾಲಯವು ಬಹುಶಃ ಪಂಚಾಯತನದ ದೇವಲಯವಾಗಿದ್ದು, ಕಾಲಕ್ರಮೇಣ ವೈಷ್ಣವಮತಪಂಥದ ಪ್ರಭಾವಕ್ಕೆ ಒಳಗಾಗಿ ಪ್ರಸ್ತುತ ರೂಪಪಡೆದುಕೊಂಡಿರಬಹುದು. ಗುಡಿಯ ಮುಂಭಾಗದಲ್ಲಿ ಎತ್ತರವಾದ ಗರುಡಸ್ತಂಭ ಅಥವ ದೀಪಸ್ತಂಭವನ್ನು ನಿರ್ಮಿಸಲಾಗಿದೆ.

**ಬೆಲ್ಲದ ಬಾಗೇವಾಡಿ**

**ಆದಿನಾಥನ ಬಸದಿ**

ಉತ್ತರಾಭಿಮುಖವಾಗಿರುವ ಈ ಬಸದಿಯು ಸುಸ್ಥಿಯಲ್ಲಿದೆ. ಎತ್ತರದ ಕಟ್ಟೆಯ ಮೇಲೆ ಇದನ್ನು ಕಟ್ಟಲಾಗಿದೆ. ವಿಶಾಲವಾದ ಪ್ರಾಂಗಣ ಇದಕ್ಕಿದೆ. ಗರ್ಭಗೃಹ, ಅಂತರಾಳ, ನವರಂಗ ಹಾಗೂ ಸಭಾಮಂಟಪವನ್ನು ಇದು ಒಳಗೊಂಡಿದೆ. ಅಲ್ಲದೇ ಗುಡಿಯ ಸುತ್ತಲೂ ಪೌಳಿ ಅಥವ ಕೌಂಪೌಂಡ್‌ನ್ನು ನಿರ್ಮಿಸಲಾಗಿದೆ.

ಗರ್ಭಗೃಹದಲ್ಲಿ ಖಡ್ಗಾಸನದಲ್ಲಿರುವ ಆದಿನಾಥನ ಶಿಲ್ಪವನ್ನಿಡಲಾಗಿದೆ. ಅದರ ಬಾಗಿಲವಾಡವು ಸರಳ ರಚನೆಯಿಂದ ಕೂಡಿದೆ. ಲಲಾಟದಲ್ಲಿ ಅರಳುತ್ತಿರುವ ಸೂರ್ಯಕಾಂತಿ ಹೂವಿನಂತೆ ಆಕಾರಪಡೆದಿರುವ ರಚನೆ ಇದೆ. ದೇವಾಲಯದ ನವರಂಗ ಹಾಗೂ ಸಭಾಮಂಟಪದಲ್ಲಿ ಚೌಕಾಕಾರದ ಕಂಬಗಳಿದ್ದು ಅವು ಪಾದ, ದಂಡ, ದಂಡಾಗ್ರ, ಕಲಶ, ಫಲಕ ಹಾಗೂ ಬೋಧಿಗೆಗಳನ್ನು ಹೊಂದಿವೆ. ದಂಡಾಗ್ರ ಅಂದರೆ ಮಧ್ಯಭಾಗದಲ್ಲಿ ವೃತ್ತಾಕಾರದ ಹದಿನಾರು ಪಟ್ಟಿಕೆಗಳನ್ನು ರಚಿಸಲಾಗಿದೆ. ವೃತ್ತಾಕಾರದ ಫಲಕ ಹಾಗೂ ಬೋಧಿಗೆಗಳು ಸುಂದರವಾಗಿವೆ. ಸಭಾಮಂಟಪದಲ್ಲಿ ಕೋಷ್ಠಕಗಳನ್ನು ರಚಿಸಲಾಗಿದ್ದು ಅವು ಬರಿದಾಗಿವೆ.

ದೇವಾಲಯದ ಮುಂಭಾಗದಲ್ಲಿ ಸುಮಾರು ೩೦ಅಡಿ ಎತ್ತರದ ಮಾನಸ್ತಂಭ ಎಂಥವರನ್ನು ಆಕರ್ಷಿಸುತ್ತದೆ. ದೇವಾಲಯದಲ್ಲಿರುವ ಕಂಬಗಳನ್ನು ಹಾಗೂ ಉಳಿದೆಲ್ಲ ಭಾಗಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕಂಬಗಳನ್ನು ಹೊರತುಪಡಿಸಿ ಉಳಿದೆಲ್ಲ ಭಾಗಗಳನ್ನು ಕಾಲಕಾಲಕ್ಕೆ ಬದಲಾಯಿಸುತ್ತಾ ಅಥವಾ ರಿಪೇರಿ ಮಾಡುತ್ತಾ ಬರಲಾಗಿದೆ ಎಂದು ತೋರುತ್ತದೆ. ಹಾಗಾಗಿ ಪ್ರಾಚೀನವಾದ ಲಕ್ಷಣಗಳನ್ನು ವಿಶೇಷವಾಗಿ ಇಲ್ಲಿರುವ ಕಂಬಗಳಲ್ಲಿ ಮಾತ್ರ ಕಾಣುತ್ತೇವೆ.

**ಕೋಚರಿ**

**ರಾಮಲಿಂಗೇಶ್ವರ ಅಥವಾ ಕಲ್ಮೇಶ್ವರ**

ಪೂರ್ವಾಭಿಮುಖವಾಗಿರುವ ಈ ದೇವಾಲಯ ಸಂಪೂರ್ಣವಾಗಿ ನೆಲಕಚ್ಚುವ ಸಮಯ ಬಹಳ ದೂರವಿಲ್ಲಂದೆನಿಸುತ್ತದೆ. ಗರ್ಭಗೃಹವನ್ನು ಬಿಟ್ಟು ಉಳಿದೆಲ್ಲ ಭಾಗಗಳು ನೆಲಸಮವಾಗಿವೆ. ದೇವಾಲಯದ ಹೊರಗೋಡೆಯ ಭಾಗಗಳು ಶಿಥಿಲಾವಸ್ಥೆಯನ್ನು ತಲುಪಿವೆ.

ಗರ್ಭಗೃಹದಲ್ಲಿ ಕಲ್ಯಾಣ ಚಾಲುಕ್ಯ ಕಾಲದ ಸುಂದರವಾದ ಲಿಂಗವಿದ್ದು, ಅದರ ಯೋನಿ ಪೀಠ ಹಾಗೂ ರುದ್ರಭಾಗಗಳು ಸುಸ್ಥಿತಿಯಲ್ಲಿವೆ. ಇದಕ್ಕಿರುವ ಉದ್ದನೆಯ ಪ್ರಣಾಲಿ ಹಾಗೂ ರುದ್ರಭಾಗ ಆಕರ್ಷಕವಾಗಿವೆ. ಗರ್ಭಗೃಹದ ಬಾಗಿಲವಾಡವು ಅರ್ಧಕಂಬಗಳನ್ನು ಹೊಂದಿದ್ದು, ಅದರ ಉತ್ತರಾಂಗದ ಭಾಗವನ್ನು ಪುಷ್ಪಲಂಕರಣೆಯಿಂದ ಅಂದಗೊಳಿಸಲಾಗಿದೆ. ಪ್ರಾಚೀನ ಗುಡಿಯ ಅವಶೇಷಗಳು ಗುಡಿಯ ಸುತ್ತಲೂ ಬಿದ್ದಿರುವುದನ್ನು ಈಗಲೂ ಕಾಣಬಹುದು.

ಇದೇ ಗ್ರಾಮದಲ್ಲಿ ಅಂದರೆ ಹೆಬ್ಬಾಳ ಮಾರ್ಗದಲ್ಲಿ ಕಾಲಭೈರವನ ಗುಡಿ ಇದೆ. ಸುಂದರವಾಗಿರುವ ಈ ಶಿಲ್ಪಕ್ಕೆ ಒಂದು ಚಿಕ್ಕ ಮಂಟಪ ಕಟ್ಟಲಾಗಿದೆ. ಬಹುಶಃ ಇದಕ್ಕೊಂದು ಗುಡಿ ಇದ್ದಿರಬಹುದು. ಅದು ಹಾಳಾದ ನಂತರ ಅದು ಇಂದಿನ ಸ್ಥಿತಿಗೆ ಬಂದು ತಲುಪಿದೆ. ಕಲ್ಯಾಣದ ಚಾಲುಕ್ಯ ಕಾಲದ ಶೈಲಿಯ ಸ್ಪಷ್ಟ ಲಕ್ಷಣಗಳನ್ನು ಹೊಂದಿರುವ ಈ ಶಿಲ್ಪವು ಕೊರಳಲ್ಲಿ ರುಂಡಮಾಲೆ, ಕೈಯಲ್ಲಿ ಖಡ್ಗ ಹಾಗೂ ಬುಡಭಾಗದಲ್ಲಿ ಅವನ ವಾಹನವಾದ ಶ್ವಾನದ ಕೆತ್ತನೆಗಳಿವೆ. ಭೈರವನಿಗಾಗಿಯೇ ಕಟ್ಟಿದ ದೇವಾಲಯ ಇಲ್ಲಿರಬಹುದು. ಅರ್ಜುನವಾಡದ ಶಿಲಾಶಾಸನದಲ್ಲಿ ಈ ಗ್ರಾಮದ ಉಲ್ಲೇಖವಿದೆ. ಇದನ್ನು 'ಕೊತ್ತಸಿರಿ' ಎಂದು ಉಲ್ಲೇಕಿಸಲಾಗಿದ್ದು ಇದು ನೂಲೆನಾಡಿನಲ್ಲಿತ್ತು. ಇದೇ ಗ್ರಾಮದ ಹನುಮಂತನ ಗುಡಿಯ ಮುಂಭಾಗದಲ್ಲಿ ಶಾಸನ ಒಂದಿದ್ದು, ಅದಕ್ಕೆ ಎಣ್ಣೆಯ ಮಜ್ಜನ ಮಾಡಿಸಲಾಗಿದ್ದು ಅದು ಸಹ ಹನ್ನೆರಡು ಅಥವ ಹದಿಮೂರನೆಯ ಶತಮಾನದ್ದಾಗಿರಬಹುದು.

**ಪಾಚ್ಛಾಪೂರ**

**ಮಲ್ಲಿಕಾರ್ಜುನ ಗುಡಿ**

ಪೂರ್ವಾಭಿಮುಖವಾಗಿರುವ ಈ ದೇವಾಲಯವು ಗ್ರಾಮದ ನಡುವೆ ಇದೆ. ಪ್ರಾಚೀನವಾಗಿದ್ದ ಈ ದೇವಾಲಯವನ್ನು ಇತ್ತೀಚೆಗೆ ಜೀರ್ಣೋದ್ಧಾರಗೊಳಿಸಲಾಗಿದ್ದು, ಪ್ರಾಚೀನ ಕಂಬಗಳನ್ನು ಹೊರತುಪಡಿಸಿದರೆ ಉಳಿದೆಲ್ಲ ಭಾಗಗಳನ್ನು ಸಿಮೆಂಟಿನಿಂದ ಬಳೆಯಲಾಗಿದೆ. ಈ ದೇವಾಲಯಕ್ಕೆ ವಿಶಾಲವಾದ ಪ್ರಾಂಗಣವಿದೆ.

ಗರ್ಭಗೃಹ ಬಾಗಿಲವಾಡವು ಅರ್ಧಕಂಬಗಳ ಹಾಗೂ ಪುಷ್ಪ ಅಲಂಕರಣೆಯ ಪಟ್ಟಿಕೆಗಳನ್ನು ಹೊಂದಿದೆ. ಉತ್ತರಾಂಗದ ಭಾಗದಲ್ಲಿ ಶಿಖರ ಪಟ್ಟಿಕೆಗಳನ್ನು ಕೆತ್ತಲಾಗಿದೆ. ಜೀರ್ಣೋದ್ಧಾರಗೊಳಿಸಿದ ನವರಂಗದಲ್ಲಿ ಹನ್ನೆರಡನೆಯ ಶತಮಾನದಲ್ಲಿ ನಿರ್ಮಿಸಿರಬಹುದಾದ ನಾಲ್ಕು ಕಂಬಗಳಿವೆ. ಅವು ಬುಡದಲ್ಲಿ ಚೌಕಾಕಾರದ ಹಾಗೂ ಮಧ್ಯಭಾಗದಲ್ಲಿ ವೃತ್ತಾಕಾರದ ಪಟ್ಟಿಕೆಗಳನ್ನು ಹೊಂದಿವೆ. ಸರಳ ರಚನೆಯ ವೃತ್ತಫಲಕ ಹಾಗೂ ಚೌಕಾಕಾರದ ಬೋಧಿಗೆಗಳನ್ನು ಕಂಬಗಳಲ್ಲಿ ಅಳವಡಿಸಲಾಗಿದೆ. ನವರಂಗದಲ್ಲಿ ವೃತ್ತಾಕಾರದ ಭುವನೇಶ್ವರಿಯನ್ನು ಕೆತ್ತಲಾಗಿದೆ. ಪ್ರಾಚೀನ ದೇವಾಲಯಕ್ಕೆ ಸಭಾಮಂಟಪವನ್ನು ಕೆಡವಿ ಹೊಸದಾಗಿ ಇನ್ನೊಂದು ಕಟ್ಟಡವನ್ನು ಕಟ್ಟಲಾಗಿದೆ. ದೇವಾಲಯದ ಆವರಣದಲ್ಲಿ ಪ್ರಾಚೀನವಾಗಿರುವ ತೃಟಿತ ಶಿಲ್ಪಾವಶೇಷಗಳನ್ನು ಇಡಲಾಗಿದೆ. ಇದೇ ಗ್ರಾಮದಲ್ಲಿ ನದಿಯ ದಂಡೆಯ ಮೇಲೆ ಸೋಮೇಶ್ವರ ದೇವಾಲಯವಿದ್ದು ಪ್ರಾಚೀನ ದೇವಾಲಯದ ಲಿಂಗ ಹಾಗೂ ನಂದಿಯನ್ನು ಬಿಟ್ಟು ಉಳಿದೆಲ್ಲ ಭಾಗಗಳು ನಾಶವಾಗಿವೆ. ಗ್ರಾಮಕ್ಕೆ ಸಂಬಂಧಿಸಿದಂತೆ ಶಾಸನ ಉಲ್ಲೇಖಗಳು ಲಭ್ಯವಾಗಿಲ್ಲ.

**ಘೋಡಗೇರಿ**

**ಗಜಲಿಂಗೇಶ್ವರ ದೇವಾಲಯ**

ಪೂರ್ವಾಭಿಮುಖವಾಗಿ ಈ ದೇವಾಲಯವು ಇತ್ತೀಚೆಗೆ ನಿರ್ಮಾಣವಾಗಿದೆ. ಆದರೆ ಈ ಆವರಣದಲ್ಲಿರುವ ಶಿಲ್ಪಗಳು ತುಂಬಾ ಪ್ರಾಚೀನವಾದವುಗಳು. ಬಹುಶಃ ಇಲ್ಲೊಂದು ಪ್ರಾಚೀನ

ಕಾಲದಲ್ಲಿ ದೊಡ್ಡದಾದ ದೇವಾಲಯವೇ ಇದ್ದಿರಬಹುದು. ಕಾರಣಾಂತರಗಳಿಂದ ಅದು ನಾಶವಾದ ನಂತರ ಪ್ರಸ್ತುತ ದೇವಾಲಯವು ನಿರ್ಮಾಣವಾಗಿದೆ. ಅಲ್ಲದೇ ಇದು ಸಾಮರಸ್ಯವನ್ನು ಸಾರುವ ಮಹತ್ವದ ದೇವಾಲಯವಾಗಿದೆ. ಬಹುಶಃ ಈ ದೇವಾಲಯದಲ್ಲಿ ಇಸ್ಲಾಂ ಮತದ ಪ್ರಭಾವ ಆಗಿರಬಹುದು. ಗಜಬರ ಎಂಬ ಹೆಸರಿನ ಮುಸ್ಲಿಂ ಅಧಿಕಾರಿಯೊಬ್ಬ ಹುಕ್ಕೇರಿಯನ್ನು ಕೇಂದ್ರವನ್ನಾಗಿಟ್ಟುಕೊಂಡು ಆಳಿರುವ ಉಲ್ಲೇಖಗಳು ಇವೆ. ಗಜಬರನ ಹೆಸರು ಲಿಂಗೇಶ್ವರನ ಜೊತೆಗೆ ಮೇಳೈಸಿರಬಹುದೇ ಎಂಬ ಅಭಿಪ್ರಾಯವು ಸಹಜವಾಗಿ ಮೂಡುತ್ತದೆ.

ದೇವಾಲಯದ ಆವರಣದಲ್ಲಿರುವ ಎರಡು ವೀರಗಲ್ಲುಗಳು ಹಾಗೂ ನಾಲ್ಕು ಮಾಸ್ತಿಕಲ್ಲುಗಳು ತುಂಬಾ ಆಕರ್ಷಕವಾಗಿವೆ. ಸುಮಾರು ಮೂರು ಅಡಿ ಎತ್ತರವಿರುವ ವೀರಗಲ್ಲುಗಳು ಯೋಧನೊಬ್ಬ ಯುದ್ಧದಲ್ಲಿ ವೀರಮರಣವನ್ನಪ್ಪಿದ ದೃಶ್ಯವು ಚಿತ್ರಿತವಾಗಿದೆ. ಇಲ್ಲಿರುವ ಮಾಸ್ತಿಕಲ್ಲುಗಳಲ್ಲಿ ಎರಡು ಎಡಗೈಯನ್ನೆತ್ತಿದ್ದರೆ ಇನ್ನುಳಿದ ಎರಡು ಬಲಗೈಯನ್ನು ಎತ್ತಿವೆ. ಒಂದೇ ಸ್ಥಳದಲ್ಲಿ ಬೇರೆ ಬೇರೆ ನಮೂನೆಯ ಈ ಮಾಸ್ತಿಕಲ್ಲುಗಳ ವಿಶೇಷವೆಂದೇ ಹೇಳಬಹುದು.

**ರಾಮಲಿಂಗೇಶ್ವರ ದೇವಾಲಯ**

ಗ್ರಾಮದಲ್ಲಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದೆ. ಇದು ಗರ್ಭಗೃಹ, ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ಗರ್ಭಗೃಹ ಹಾಗೂ ಅಂತರಾಳದ ಬಾಗಿಲವಾಡಗಳು ಸಾದಾ ರಚನೆಯಿಂದ ಕೂಡಿವೆ. ಅಲ್ಲದೇ ಅಂತರಾಳಕ್ಕೆ ಇಕ್ಕೆಲಗಳಲ್ಲಿ ಜಾಲಂಧರಗಳನ್ನು ಜೋಡಿಸಲಾಗಿದೆ. ನವರಂಗವು ನಾಲ್ಕು ಕಂಬಗಳನ್ನು ಹೊಂದಿದ್ದು, ಅದರಲ್ಲಿರುವ ಭುವನೇಶ್ವರಿಯ ಕೆತ್ತನೆ ಆಕರ್ಷಕವಾಗಿದೆ. ನವರಂಗದಲ್ಲಿರುವ ನಾಲ್ಕು ಕಂಬಗಳು ಪಾದ, ಪೀಠ, ಗೋಡೆ(ಪಾದ) ದಂಡಾಗ್ರ, ಕಲಶ, ಫಲಕ ಹಾಗೂ ಬೋಧಿಗೆಗಳನ್ನು ಹೊಂದಿವೆ. ದಂಡಾಗ್ರ ಭಾಗದಲ್ಲಿ ವೃತ್ತ ಪಟ್ಟಿಯನ್ನು ಸುತ್ತಲೂ ಕೆತ್ತಲಾಗಿದೆ. ಕಂಬಗಳ ಕಲಶ ಭಾಗದಲ್ಲಿ ನಾಲ್ಕು ಕಡೆಗೂ ತ್ರಿಕೋನ ಆಕೃತಿಯ ಪಟ್ಟಿಕೆಯನ್ನು ರಚಿಸಲಾಗಿದೆ. ನವರಂಗದ ಬಾಗಿಲವಾಡದಲ್ಲಿ ಅರ್ಧ ಕಂಬಗಳ ಪಟ್ಟಿಕೆ ಇದೆ. ಇಲ್ಲಿರುವ ಕೋಷ್ಠಕ ಅಥವ ಗೂಡುಗಳಲ್ಲಿ ಕೆಲವು ಶಿಲ್ಪಗಳನ್ನಿಡಲಾಗಿದೆ. ಅವುಗಳ ಕುರಿತು ಮೂರ್ತಿಶಿಲ್ಪಗಳ ವಿವರಣೆಯಲ್ಲಿ ನಮೂದಿಸಲಾಗಿದೆ.

ದೇವಾಲಯದ ಅಧಿಷ್ಠಾನವು ಸ್ಪಷ್ಟವಾಗಿ ಕಂಡುಬರುತ್ತದೆ. ಇದು ಕಲ್ಯಾಣದ ಚಾಲುಕ್ಯರ ಉಚ್ಛ್ರಾಯ ಕಾಲದಲ್ಲಿ ಅಂದರೆ ಹನ್ನೊಂದನೆಯ ಶತಮಾನ ಉತ್ತರಾರ್ಧ ಭಾಗದಲ್ಲಿ ನಿರ್ಮಿಸಿದ್ದಿರಬಹುದು. ಅಧಿಷ್ಠಾನವು ಜಗತಿ, ಉಪಾನ, ಗಳ, ತ್ರಿಪಟ್ಟ ಕುಮುದ ಹಾಗೂ ಕಪೋತಗಳನ್ನು ಹೊಂದಿದೆ. ಭಿತ್ತಿಯ ಭಾಗವು ಅತ್ಯಂತ ಸರಳ ರಚನೆಯದ್ದು. ಪ್ರಸ್ತರ ಭಾಗಕ್ಕೆ ಸಿಮೆಂಟಿನಿಂದ ಬಳಿಯಲಾಗಿದ್ದು ಅದರಲ್ಲಿರುವ ರಚನೆಗಳನ್ನು ಸ್ಪಷ್ಟವಾಗಿ ಗುರುತಿಸಲಿಕ್ಕಾಗದು. ಭಿತ್ತಿ ಮತ್ತು ಪ್ರಸ್ತರ ಭಾಗ ನಡುವೆ ಇರುವ ಮಂಜೂರಿನ ಭಾಗವು

ದೇವಾಲಯದ ಸುತ್ತಲೂ ನಿರ್ಮಾಣವಾಗಿದೆ. ಈ ಪ್ರಾಚೀನ ದೇವಾಲಯಕ್ಕೆ ಸಂಬಂಧಿಸಿದ ಶಾಸನಗಳ ಉಲ್ಲೇಖವು ಕಂಡುಬಂದಿಲ್ಲ.

**ನೀಲಕಂಠೇಶ್ವರ**

ಪೂರ್ವಾಭಿಮುಖವಾಗಿರುವ ಈ ದೇವಾಲಯವು ಸಹ ಗ್ರಾಮದಲ್ಲಿಯೇ ಇದೆ. ಗರ್ಭಗೃಹ, ತೆರೆದ ಅಂತರಾಳ, ನವರಂಗವನ್ನು ಹೊಂದಿದೆ. ಗರ್ಭಗೃಹದ ಬಾಗಿಲವಾಡವು ಸಾದಾ ರಚನೆಯಿಂದ ಕೂಡಿದ್ದು ಅಂತರಾಳಕ್ಕೆ ತೋರಣ ಕಂಬಗಳಿಂದ ಅಲಂಕರಣೆ ಮಾಡಲಾಗಿದೆ. ನವರಂಗವು ದುಂಡಾಕಾರದ ನಾಲ್ಕು ಕಂಬಗಳನ್ನು ಹೊಂದಿದ್ದು ಅವು ವೃತ್ತಾಕಾರದ ಕಂಬಗಳಾಗಿವೆ. ನವರಂಗದ ಬಾಗಿಲವಾಡದಲ್ಲಿ ಅರ್ಧಕಂಬ ಪಟ್ಟಿಕೆಗಳನ್ನು ರಚಿಸಲಾಗಿದೆ.

ಅಧಿಷ್ಠಾನದಲ್ಲಿ ಜಗತಿ, ಉಪಾನ, ಗಳ, ತ್ರಿಪಟ್ಟ, ಕುಮುದ, ಅದೋಪದ್ಮಪಟ್ಟಿ, ಅಂತರಿ, ಕಪೋತ ಭಾಗಗಳು ಇವೆ. ದೇವಾಲಯದ ಭಿತ್ತಿಯ ಭಾಗವು ಸರಳ ರಚನೆಯಿಂದ ಕೂಡಿದೆ. ಪ್ರಸ್ತರ ಭಾಗದಲ್ಲಿ ಕಪೋತ ಪಟ್ಟಿಗಳು, ಗಳ, ಅಂತರಿ ಹಾಗೂ ಪ್ರಣಾಲಿಯ ರಚನೆಗಳಿವೆ. ದೇವಾಲಯಕ್ಕಿರುವ ಶಿಖರವು ಎರಡು ತಲವನ್ನು ಹೊಂದಿದೆ. ಇದು ದ್ರಾವಿಡ ಮಾದರಿಯ ಶಿಖರ. ದೇವಾಲಯದ ಮುಂಭಾಗದಲ್ಲಿ ಎರಡು ವೀರಗಲ್ಲು ಶಿಲ್ಪಗಳಿವೆ. ಅಲ್ಲದೇ ಗುಡಿಯ ಸುತ್ತಲೂ ಪ್ರಾಚೀನ ಅವಶೇಷಗಳು ಬಿದ್ದಿರುವುದನ್ನು ಕಾಣುತ್ತೇವೆ.

**ಸಂಕೇಶ್ವರದಲ್ಲಿರುವ ದೇವಾಲಯಗಳು**

**ಶಂಕರಲಿಂಗೇಶ್ವರ**

ಈ ದೇವಾಲಯವು ಪೂರ್ವಾಭಿಮುಖವಾಗಿದೆ. ಆದರೆ ದೇವಾಲಯದ ಆವರಣಕ್ಕೆ ಉತ್ತರದಲ್ಲಿ ಪ್ರವೇಶ ನಿರ್ಮಿಸಲಾಗಿದೆ. ರಾಷ್ಟ್ರಕೂಟ ಹಾಗೂ ಕಲ್ಯಾಣದ ಚಾಲುಕ್ಯರ ಸಾಮಂತರಾಗಿದ್ದ ಸವದತ್ತಿಯ ರಟ್ಟರಸರ ಕಾಲದಲ್ಲಿ ಈ ಸ್ಮಾರಕವು ನಿರ್ಮಾಣವಾಗಿದೆ. ಬಹುಶಃ ಇದು ಹನ್ನೆರಡನೆಯ ಶತಮಾನದ ಮಧ್ಯಾವಧಿಯಲ್ಲಿ ಕಟ್ಟಲ್ಪಟ್ಟಿರಬಹುದು. ಗರ್ಭಗೃಹ, ಅಂತರಾಳ, ನವರಂಗ, ವಿಶಾಲವಾದ ಮಂಟಪ ಹಾಗೂ ಅತೀ ವಿಸ್ತೃತವಾದ ಆವರಣ ದೇವಾಲಯಕ್ಕಿದೆ.

ಗರ್ಭಗೃಹದ ಬಾಗಿಲವಾಡವು ಸಪಾಟಾಗಿದ್ದು ಅದು ಗುರುತು ಸಿಗದಂತೆ ಆಗಿದೆ. ಅಂತರಾಳದ ಬಾಗಿಲವಾಡವು ಸಹ ರಿಪೇರಿ ಕಾರ್ಯಕ್ಕೆ ಒಳಗಾಗಿದೆ. ಅದು ಇತ್ತೀಚೆಗೆ ಆಗಿರುವಂತದ್ದು. ಇದರ ಸಪಾಟಾದ ಲಲಾಟದಲ್ಲಿ ಗಣಪತಿಯ ಉಬ್ಬು ಶಿಲ್ಪವನ್ನು ಕೆತ್ತಲಾಗಿದೆ. ನವರಂಗದ ಬಾಗಿಲವಾಡವು ಮಾತ್ರ ಚಿತ್ತಾಕರ್ಷಕವಾಗಿದೆ. ಇದರಲ್ಲಿ ಪಂಚಾ ಪಟ್ಟಿಕೆಗಳಿವೆ. ಉತ್ತರಾಂಗದ ಭಾಗದಲ್ಲಿ ಶಿಖರ ಪಟ್ಟಿಕೆಗಳನ್ನು ರಚಿಸಲಾಗಿದೆ. ಲಲಾಟದಲ್ಲಿ ಗಜಲಕ್ಷ್ಮಿ ಉಬ್ಬು ಶಿಲ್ಪವಿದೆ. ಬಾಗಿಲವಾಡದ ಇಕ್ಕೆಲುಗಳಲ್ಲಿ ಅರ್ಧಕಂಬಗಳನ್ನು ಅಳವಡಿಸಲಾಗಿದ್ದು, ಅವು ಸಹ ಹೆಚ್ಚಿನ ಅಲಂಕರಣೆಗಳನ್ನು ಹೊಂದಿವೆ. ನವರಂಗಕ್ಕೆ ಮೂರು ಕಡೆಗೂ ಪ್ರವೇಶವನ್ನು

ನಿರ್ಮಿಸಲಾಗಿದೆ. ಅವುಗಳ ಬಾಗಿಲವಾಡಗಳು ಮೇಲೆ ವಿವರಿಸಿದ ಲಕ್ಷಣಗಳನ್ನು ಹೊಂದಿವೆ. ನವರಂಗದಲ್ಲಿರುವ ಕಂಬಗಳು ಬೃಹದಾಕಾರದವುಗಳು ಹಾಗೂ ಚೌಕಾಕಾರವಾಗಿವೆ. ಇಂಥವೇ ಕಂಬಗಳು ಸಭಾಮಂಟಪದಲ್ಲಿವೆ. ಇಲ್ಲಿ ಸುಮಾರು ೩೬ ಕಂಬಗಳನ್ನು ಅಳವಡಿಸಲಾಗಿದೆ. ಇವು ಪಾದ, ಗೋಡೆ(ದಂಡ) ದಂಡಾಗ್ರ, ಕಲಶ, ಫಲಕ ಹಾಗೂ ಬೋಧಿಗೆಗಳನ್ನು ಹೊಂದಿವೆ. ಕಂಬಗಳ ಮಧ್ಯಭಾಗದಲ್ಲಿ ಹದಿನೆಂಟು ಪಟ್ಟಿಕೆಗಳನ್ನು ರಚಿಸಲಾಗಿದೆ. ಕಂಬಗಳಲ್ಲಿ ವೃತ್ತ ಮತ್ತು ತಟ್ಟೆ ಆಕಾರದ ಫಲಕಗಳು ಬೃಹದಾಕಾರದಲ್ಲಿವೆ. ಸಭಾ ಮಂಟಪದಲ್ಲಿ ಸುತ್ತಲೂ ಕಕ್ಷಾಸನವಿದೆ. ಇದು ತೆರೆದ ಸಭಾ ಮಂಟಪವಾಗಿದೆ. ಅಲ್ಲದೇ ಇದಕ್ಕೂ ಸಹ ಮೂರು ಕಡೆಗೂ ಪ್ರವೇಶ ನಿರ್ಮಿಸಲಾಗಿದೆ.

ನವರಂಗದಲ್ಲಿರುವ ಭುವನೇಶ್ವರಿಯು ಈ ದೇವಾಲಯದ ಪ್ರಮುಖ ಆಕರ್ಷಣೆ. ಹಾನಗಲ್ಲಿನ ತಾರಕೇಶ್ವರ ದೇವಾಲಯದಲ್ಲಿರುವ ಭುವನೇಶ್ವರಿಯಂಥ ರಚನೆ ಇಲ್ಲಿಯು ಇದೆ. ಆಳವಾದ ಮತ್ತು ಅಗಲವಾಗಿರುವ ಭುವನೇಶ್ವರಿಯಲ್ಲಿ ಸುತ್ತಲೂ ವಿವಿಧ ಅಲಂಕಾರಣೆಗಳನ್ನು ಮಾಡಲಾಗಿದೆ. ಹುಕ್ಕೇರಿ ತಾಲೂಕಿನಲ್ಲಿ ಅಳಿದುಳಿದಿರುವ ದೇವಾಲಯಗಳಲ್ಲಿ ಈ ಮಾದರಿಯ ಸುಂದರವಾದ ಭುವನೇಶ್ವರಿಯನ್ನು ಎಲ್ಲೂ ಕಾಣಲಾಗುವುದಿಲ್ಲ.

ದೇವಾಲಯದ ಅಧಿಷ್ಠಾನವನ್ನು ಸಿಮೆಂಟಿನಿಂದ ಬಳೆಯಲಾಗಿದ್ದು, ಅದರಲ್ಲಿದ್ದ ಭಾಗಗಳು ಕಂಡುಬರುವುದಿಲ್ಲ. ಬಹುಶಃ ಇದು ಉಪಾನ, ಜಗತಿ, ಕಪೋತ, ಗಳ, ತ್ರಿಪಟ್ಟ, ಕುಮುದ ಭಾಗಗಳನ್ನು ಹೊಂದಿರಬಹುದೆಂದು ಊಹಿಸಬಹುದಾಗಿದೆ. ಹೊರಭಿತ್ತಿಯ ಭಾಗವು ಆಕರ್ಷಕವಾಗಿದ್ದು ಕೂಟದ ಪ್ರತಿ ಭಾಗದಲ್ಲೂ ಸ್ತಂಭ ಶಿಖರ ಪಟ್ಟಿಕೆಗಳನ್ನು ರಚಿಸಲಾಗಿದೆ. ಅಲ್ಲದೇ ಅವುಗಳನ್ನು ಯಾಳಿಯ ಅಲಂಕರಣೆಗಳಿಂದ ಇನ್ನಷ್ಟು ಸುಂದರಗೊಳಿಸುವ ಕಾರ್ಯ ಮಾಡಲಾಗಿದೆ. ಹೊರಭಿತ್ತಿಯಲ್ಲಿ ಮೂರು ಕೋಷ್ಠಕಗಳಿದ್ದು ಅವುಗಳು ಚಿಕ್ಕಮಂಟಪಗಳಂತೆ ಕಾಣುತ್ತವೆ. ಅವುಗಳನ್ನು ಶಿಖರ, ಸ್ಥೂಪಿ ಮತ್ತು ಕಲಶ ಅಲಂಕರಣೆಗಳೊಂದಿಗೆ ಸೌಂದರ್ಯವನ್ನು ಇಮ್ಮಡಿಗೊಳಿಸಲಾಗಿದೆ. ಆದರೆ ಅವು ಬರಿದಾಗಿವೆ.

ಇದೇ ಗುಡಿಯ ಬಲಭಾಗದಲ್ಲಿ ಇನ್ನೊಂದು ಚಿಕ್ಕ ಗುಡಿ ಇದೆ. ಅದು ಕೇವಲ ಗರ್ಭಗೃಹವನ್ನು ಮಾತ್ರ ಹೊಂದಿದೆ. ಈ ಗುಡಿಯು ಗರ್ಭಗೃಹದ ಬಾಗಿಲವಾಡವು ಸಹ ಶಂಕರಲಿಂಗ ದೇವಾಲಯದ ನವರಂಗದ ಬಾಗಿಲವಾಡದಂತೆ ಚಿತ್ತಾಕರ್ಷಕವಾಗಿದೆ. ಗರ್ಭಗೃಹದಲ್ಲಿ ಲಿಂಗವನ್ನಿಡಲಾಗಿದೆ. ದೇವಾಲಯದ ಆವರಣದಲ್ಲಿ ದತ್ತಾತ್ರೇಯನ ಚಿಕ್ಕ ಮಂದಿರವಿದೆ. ಅಲ್ಲದೇ ಇದೇ ಆವರಣದಲ್ಲಿ ಬೃಹದಾಕಾರದ ಹಾಗೂ ಸುಂದರವಾದ ಕೂರ್ಮ ಅಥವ ಆಮೆಯ ಶಿಲ್ಪವನ್ನು ಹೂಳಿಡಲಾಗಿದೆ.

### ನಾರಾಯಣನ ದೇವಾಲಯ

ಶಂಕರಲಿಂಗ ದೇವಾಲಯದ ಸಮೀಪದಲ್ಲಿಯೇ ಈ ಗುಡಿಯು ಇದೆ. ಅಸ್ತಿತ್ವದಲ್ಲಿರುವ ಎಲ್ಲ ದೇವಾಲಯಗಳಿಗಿಂತ ಇದು ಪ್ರಾಚೀನವಾದುದು ಎಂಬುದರಲ್ಲಿ ಅನುಮಾನವಿಗಳಿಲ್ಲ.

ಅಲ್ಲದೇ ಕಲಾಸಿರಿವಂತಿಕೆಯಲ್ಲಿ ಇಲ್ಲಿರುವ ಎಲ್ಲ ಸ್ಮಾರಕಗಳಿಗಿಂತ ಮಿಗಿಲಾದುದು. ಸ್ಥಳೀಯವಾಗಿ ಇದನ್ನು ಲಕ್ಷ್ಮೀನಾರಾಯಣನೆಂದು ಕರೆಯಲಾಗುತ್ತದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಗರ್ಭಗೃಹದಲ್ಲಿ ಸುಮಾರು ಮೂರು ಅಡಿ ಎತ್ತರವುಳ್ಳ ಸಮಭಂಗಿಯಲ್ಲಿರುವ ನಾರಾಯಣ ಶಿಲ್ಪ ಸುಂದರವಾಗಿದೆ.

ಗರ್ಭಗೃಹ ಹಾಗೂ ಅಂತರಾಳಗಳ ಬಾಗಿಲವಾಡಗಳು ಸರಳ ರಚನೆಯಿಂದ ಕೂಡಿವೆ. ಅಂತರಾಳದ ಇಕ್ಕೆಲಗಳಲ್ಲಿ ಜಾಲಂಧರವನ್ನು ಅಳವಡಿಸಲಾಗಿದೆ. ಉತ್ತರಾಂಗದ ಭಾಗದಲ್ಲಿ ಶಿಖರ ಪಟ್ಟಿಕೆಗಳಿಂದ ಅಲಂಕರಣಗೊಳಿಸಲಾಗಿದೆ. ನವರಂಗವು ಎರಡು ಕಡೆಗೂ ಪ್ರವೇಶವನ್ನು ಹೊಂದಿದೆ. ಇಲ್ಲಿರುವ ಕಂಬಗಳು ಹಾಗೂ ಭುವನೇಶ್ವರಿಯ ಕೆತ್ತನೆ ಶಂಕರಲಿಂಗ ದೇವಾಲಯದ ನವರಂಗ ವಿವರಣೆಯಲ್ಲಿ ವಿವರಿಸಿದ ಎಲ್ಲ ಲಕ್ಷಣಗಳನ್ನು ಇಲ್ಲಿರುವ ಕಂಬಗಳು ಹೊಂದಿವೆ. ನವರಂಗದಲ್ಲಿ ಎರಡು ಕೋಷ್ಠಕಗಳಿದ್ದು, ಅವುಗಳನ್ನು ಶಿಖರ ಪಟ್ಟಿಕೆಗಳಿಂದ ಸುಂದರಗೊಳಿಸಲಾಗಿದೆ. ವಿಷ್ಣು ಮತ್ತು ನಾಗದೇವತೆಯ ಶಿಲ್ಪಗಳನ್ನು ಈ ಕೋಷ್ಠಕದಲ್ಲಿ ಇಡಲಾಗಿದೆ.

ನಾರಾಯಣ ದೇವಾಲಯವು ನಕ್ಷತ್ರಾಕಾರದ ರಚನೆಯನ್ನು ಹೊಂದಿದ್ದು, ಇದರ ಅಧಿಷ್ಠಾನ ಹಾಗೂ ಹೊರಭಿತ್ತಿಯು ಎಂಥವರನ್ನು ಆಕರ್ಷಿಸುತ್ತದೆ. ಅಧಿಷ್ಠಾನದಲ್ಲಿ ಉಪಾನ, ತ್ರಿಪಟ್ಟಕುಮುದ, ಗಳ ಹಾಗೂ ಕಪೋತವನ್ನು ಹೊಂದಿದೆ. ನಕ್ಷತ್ರಾಕಾರದ ಅಧಿಷ್ಠಾನದ ಪ್ರತಿ ಕೂಟದಲ್ಲಿಯೂ ಅರ್ಧಕಂಬಗಳ ಪಟ್ಟಿಕೆಯನ್ನು ರಚಿಸಲಾಗಿದೆ. ಹೊರಭಿತ್ತಿ ಅಥವ ಗೋಡೆಯು ತುಂಬಾ ಮನಸೆಳೆಯುತ್ತದೆ. ಗೋಡೆಯಲ್ಲಿ ಮುಖಮಂಟಪಗಳನ್ನು ಮಾಡಲಾಗಿದೆ. ಅಲ್ಲದೇ ಮಂಟಪಗಳ ಮಧ್ಯಭಾಗದಲ್ಲಿ ಶಿಖರ ಸ್ಥಂಭ ಪಟ್ಟಿಕೆಗಳು ಹಾಗೂ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಅಂಥ ಉಬ್ಬುಶಿಲ್ಪಗಳಲ್ಲಿ ಪ್ರಮುಖವಾಗಿ ಅಭಿಪ್ರಾಯಿಸುವುದಾದರೆ ಶಾಸನವನ್ನು ರಚಿಸುತ್ತಿರುವ ಬಾಲಕಿ ಹಾಗೂ ದರ್ಪಣ ಸುಂದರಿಯರ ಉಬ್ಬು ಶಿಲ್ಪಗಳು ಇಲ್ಲಿವೆ. ಇತಿಹಾಸ ಪ್ರಸಿದ್ಧವಾದ ಜಲಸಂಗಿ(ಬೀದರ ಜಿಲ್ಲೆ)ಯ ಶಿಲ್ಪಗಳನ್ನು ಇವು ಹೋಲುತ್ತವೆ. ಇವುಗಳಲ್ಲದೇ ಕೊಳಲುಧಾರಿ ಕೃಷ್ಣನ, ವರಾಹಶಿಲ್ಪ ಹಾಗೂ ವಿಷ್ಣುವಿನ ಅವತಾರಗಳನ್ನು ಪ್ರಚುರಪಡಿಸುವ ಕಥಾನಕ ಶಿಲ್ಪಗಳ ಈ ದೇವಾಲಯದ ಹೊರಭಿತ್ತಿಯಲ್ಲಿ ಅಂದವಾಗಿ ಕೆತ್ತಲಾಗಿದೆ. ಪ್ರಸ್ತರಭಾಗವು ಕಪೋತ, ಗಳ ಮತ್ತು ಕುಮುದ ರಚನೆಗಳನ್ನು ಹೊಂದಿದೆ. ಆದರೆ ದುರ್ದೈವವಶಾತ್ ಇದಕ್ಕಿರುವ ಶಿಖರವು ಸಂಪೂರ್ಣವಾಗಿ ಬಿದ್ದುಹೋಗಿದೆ. ಬಹುಶಃ ಇದಕ್ಕೆ ವೇಸರ ಅಥವ ಕಲ್ಯಾಣ ಚಾಲುಕ್ಯ ಕಾಲದ ಲಕ್ಷಣವುಳ್ಳ ಶಿಖರವು ಈ ದೇವಾಲಯಕ್ಕಿದ್ದಿರಬಹುದು.

### ಜೈನ ಬಸದಿ

ಉತ್ತರಾಭಿಮುಖವಾಗಿರುವ ಈ ಬಸದಿಯು ನಾರಾಯಣ ಗುಡಿಯ ಸಮೀಪದಲ್ಲಿದೆ.

ಪ್ರಾಚೀನವಾಗಿರುವ ಇದನ್ನು ಇತ್ತೀಚೆಗೆ ಜೀರ್ಣೋದ್ಧಾರಗೊಳಿಸುವ ಕೆಲಸವನ್ನು ಮಾಡುತ್ತಿದ್ದಾರೆ. ಗರ್ಭಗೃಹ, ಅಂತರಾಳ ಮತ್ತು ನವರಂಗ ಈ ದೇವಾಲಯಕ್ಕಿವೆ. ಇಲ್ಲಿರುವ ಕಂಬಗಳು ಬಾಗಿಲವಾಡಗಳು, ಅಧಿಷ್ಠಾನದ ಭಾಗಗಳು ಹಾಗೂ ಗರ್ಭಗೃಹದ ಹೊರಭಿತ್ತಿಯ ಭಾಗಗಳು ಹೆಚ್ಚು ಕಡಿಮೆ ನಾರಾಯಣನ ದೇವಾಲಯದ ಪ್ರತಿರೂಪದಂತೆ ಇದೆ. ಆದರೆ ಆ ದೇವಾಲಯದ ಹೊರಭಿತ್ತಿಯಲ್ಲಿರುವ ಶಾಸನ ಶಿಲಾಬಾಲಿಕೆ ಹಾಗೂ ದರ್ಪಣ ಸುಂದರಿಯ ಅಲಂಕರಣೆಗಳು ಇರುವುದಿಲ್ಲ.

**ಮೂರ್ತಿಶಿಲ್ಪಗಳು**

ಮೂರ್ತಿಶಿಲ್ಪ ಕಲೆಯು ಅತ್ಯಂತ ಪ್ರಾಚೀನವಾದ ಕಲೆ. ಇದು ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿದೆ ಎಂದು ಹೇಳಬಹುದು. ಮೂರ್ತಿ ಶಿಲ್ಪಕಲೆ ದೇವಾಲಯ ವಾಸ್ತು ಶಿಲ್ಪಕ್ಕೆ ಪೂರಕವಾದ ಒಂದು ಕಲೆಯಾಗಿ ಬೆಳೆದು ಬಂದಿರುವುದನ್ನು ಕಾಣಬಹುದು. ದೇವರಿಗಾಗಿ ಆಲಯಗಳನ್ನು ನಿರ್ಮಿಸಿದರೆ, ದೇವರುಗಳ ಕಲ್ಪನೆಗೆ ಸಾಂಕೇತಿಕವಾದ ಸ್ವರೂಪವನ್ನು ಕೊಡಲು ಮೂರ್ತಿಶಿಲ್ಪವು ಪ್ರಯತ್ನಿಸಿತು.

ಸಾಮಾನ್ಯವಾಗಿ ಮಣ್ಣು, ಶಿಲೆ ಅಥವಾ ಯಾವುದೇ ಲೋಹಗಳಿಂದ ರೂಪಿಸಲಾದ ಅಥವಾ ಅವುಗಳ ಮೇಲೆ ಕೆತ್ತಲಾದ ಪ್ರಾಣಿ, ಮನುಷ್ಯ ಅಥವಾ ದೇವರ ಆಕಾರಗಳನ್ನು ಮೂರ್ತಿಶಿಲ್ಪಗಳೆಂದು ಕರೆಯಬಹುದು. ಸಿಂಧೂ ಸಂಸ್ಕೃತಿಯ ಕಾಲದ ಮಣ್ಣಿನ ಮುದ್ರೆಗಳು ಪಶುಪತಿ, ವೃಷಭ, ಕಂಚಿನಿಂದ ನಿರ್ಮಿತವಾದ ನರ್ತಕಿಯ ಶಿಲ್ಪ ಮುಂತಾದವುಗಳನ್ನು ಗಮನಿಸಿದಾಗ ಬಹುಶಃ ವಾಸ್ತು ಶಿಲ್ಪಕ್ಕಿಂತ ಪ್ರಾಚೀನವಾದ ಇತಿಹಾಸವನ್ನು ಮೂರ್ತಿ ಶಿಲ್ಪವು ಪಡೆದಿರುವುದು ಕಂಡುಬರುತ್ತದೆ.

ಸಿಂಧೂ ಸಂಸ್ಕೃತಿಯ ನಂತರ ಬಂದಂತಹ ಆರ್ಯರು ನಿಸರ್ಗ ಆರಾಧಕರಾಗಿದ್ದರು. ಅವರ ಸಾಹಿತ್ಯ ಉಳಿದು ಬಂದಂತೆ ಶಿಲ್ಪಗಳು ಉಳಿದು ಬಂದಿರುವುದಿಲ್ಲ. ಭಾರತೀಯ ಶಿಲ್ಪ ಸಂಪತ್ತಿನ ಅಧಿಕ ಭಾಗವನ್ನು ಒಂದೆಡೆ ನೋಡುವುದು ಸಾಧ್ಯವಿಲ್ಲ. ಕೆಲವು ಶಿಲ್ಪಗಳನ್ನು ದೇವಾಲಯಗಳಲ್ಲಿ ಕೆಲವು ಶಿಲ್ಪಗಳನ್ನು ಸರ್ಕಾರಿ ಮತ್ತು ಖಾಸಗಿ ವಸ್ತು ಸಂಗ್ರಹಾಲಯಗಳಲ್ಲಿ ಕಾಣಬಹುದು.[೧]

ಹುಕ್ಕೇರಿ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ವಿವಿಧ ರಾಜವಂಶಗಳ ಆಳ್ವಿಕೆಯ ಕಾಲದಲ್ಲಿ ನಿರ್ಮಿತ ದೇವಾಲಯಗಳು, ಮೂರ್ತಿಶಿಲ್ಪಗಳು ಲಭ್ಯವಾಗಿವೆ. ಅದರಲ್ಲಿ ವಿಶೇಷವಾಗಿ ಕಲ್ಯಾಣದ ಚಾಳುಕ್ಯರು ಮತ್ತು ಸವದತ್ತಿ ರಟ್ಟರು ನಿರ್ಮಿಸಿದ ದೇವಾಲಯಗಳು, ಮೂರ್ತಿಶಿಲ್ಪಗಳು ಈ ಪ್ರದೇಶದಲ್ಲಿ ಕಂಡುಬಂದಿವೆ. ಪ್ರಮುಖವಾದ ಮೂರ್ತಿಶಿಲ್ಪಗಳಾದ, ಶೈವ ಧರ್ಮಕ್ಕೆ ಸಂಬಂಧಪಟ್ಟಂತಹ ಮೂರ್ತಿಶಿಲ್ಪಗಳು, ಸೂರ್ಯ, ಉಮಾಮಹೇಶ್ವರ, ಷಣ್ಮುಖ, ಭೈರವ,

ಪ್ರಾಚೀನ ಲಿಂಗಗಳು ಹಾಗೂ ಇನ್ನೂ ಮುಂತಾದ ವಿಗ್ರಹಗಳು ದೊರಕಿರುತ್ತವೆ. ವೈಷ್ಣವ ಮೂರ್ತಿಶಿಲ್ಪಗಳಲ್ಲಿ ಪ್ರಮುಖವಾದವು–ನಾರಾಯಣ, ವೇಣುಗೋಪಾಲ, ಕೃಷ್ಣ ಹಾಗೂ ವಿಷ್ಣುವಿನ ಮೂರ್ತಿಶಿಲ್ಪಗಳು. ಇನ್ನೂ ಜೈನಧರ್ಮಕ್ಕೆ ಸಂಬಂಧಪಟ್ಟ ವಿಗ್ರಹಗಳು ಆದಿನಾಥ, ಚಂದ್ರಪ್ರಭಾ, ನೇಮಿನಾಥ, ಪಾರ್ಶ್ವನಾಥ, ಮಹಾವೀರ, ಬಾಹುಬಲಿ, ಜ್ವಾಲಾಮಾಲಿನಿ, ಪದ್ಮಾವತಿ ಇನ್ನೂ ಮುಂತಾದ ವಿಗ್ರಹಗಳು ಹುಕ್ಕೇರಿ ಸುತ್ತಮುತ್ತಲಿನ ಗ್ರಾಮಗಳಲ್ಲಿ ಹೇರಳವಾಗಿ ದೊರೆತಿವೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಿಕ್ಕಂತಹ ವಿಗ್ರಹಗಳ ಪರಿವೀಕ್ಷಣೆ, ಛಾಯಾಪ್ರತಿ ಮಾಡಿ ಅವುಗಳ ವಿವರಣೆಯನ್ನು ನೀಡಲಾಗಿದೆ.

**ಶೈವಮೂರ್ತಿ ಶಿಲ್ಪಗಳು :**

(೧)

| | | |
|---|---|---|
| ಮೂರ್ತಿ ಶಿಲ್ಪ | : | ಸೂರ್ಯ |
| ಭಂಗಿ | : | ನಿಂತ |
| ಸ್ಥಳ | : | ಘೋಡಗೇರಿಯ ರಾಮಲಿಂಗೇಶ್ವರ ದೇವಾಲಯದ ಸಭಾಮಂಟಪದ ಗೋಡೆಯಲ್ಲಿರುವ ಕೋಷ್ಠ |
| ಶಿಲೆ | : | ಕಪ್ಪು ಶಿಲೆ |

**ವಿಗ್ರಹದ ವಿವರಣೆ**

ಸೂರ್ಯ ವಿಗ್ರಹವು ನಿಂತ ಭಂಗಿಯಲ್ಲಿದ್ದು ೬೬ ಸೆಂ.ಮೀ. ಎತ್ತರ ಮತ್ತು ೩೮ ಸೆ.ಮೀ. ಅಗಲವಾಗಿದೆ. ೨ ಕೈಗಳನ್ನು ಹೊಂದಿದ್ದು ಎರಡು ಕೈಗಳಲ್ಲಿ ಪುಷ್ಪಗೊಂಚಲನ್ನು ಹಿಡಿದಿದ್ದಾನೆ. ಇವನು ಕಿರೀಟಧಾರಿಯಾಗಿದ್ದು ಕಿವಿಯಲ್ಲಿ ಕಿವಿಯೋಲೆ, ಕೊರಳಲ್ಲಿ ಕಂಠಹಾರ, ಮಣಿಸರ, ಯಜ್ಞೋಪವೀತ ಹಾರ ಧರಿಸಿರುತ್ತಾರೆ. ನಡಪಟ್ಟಿ ಮತ್ತು ಕಾಲಲ್ಲಿ ದಪ್ಪನೆಯ ಕಾಲ್ಗಡಗಗಳನ್ನು ಧರಿಸಿದ್ದಾನೆ. ಪ್ರಭಾವಳಿಯ ಮೇಲ್ಭಾಗದಲ್ಲಿ ಎಡ ಮತ್ತು ಬಲಕ್ಕೆ ಬಾಣಗಳನ್ನು ಬಿಡುತ್ತಿರುವ ಚಿಕ್ಕ ಶಿಲ್ಪಗಳಿರುತ್ತವೆ. ಕೆಳಗಡೆಗೆ ಕಾಮ ಮತ್ತು ರತಿಯರ ಶಿಲ್ಪಗಳನ್ನು ಕೆತ್ತಲಾಗಿರುತ್ತದೆ. ಈ ಮೂರ್ತಿಯ ಪೀಠದ ಮಧ್ಯದಲ್ಲಿ ಏಳು ಕುದುರೆಗಳು ರಥವನ್ನೆಳೆಯುತ್ತಿರುವ ಚಿತ್ರಣವನ್ನು ಕೆತ್ತಲಾಗಿರುತ್ತದೆ.

(೨)

| | | |
|---|---|---|
| ಮೂರ್ತಿ ಶಿಲ್ಪ | : | ಉಮಾಮಹೇಶ್ವರ |
| ಭಂಗಿ | : | ಸುಖಾಸನ |
| ಸ್ಥಳ | : | ಘೋಡಗೇರಿಯ ರಾಮಲಿಂಗೇಶ್ವರ ದೇವಾಲಯದ ಸಭಾಮಂಟಪದಲ್ಲಿರುವ ಎಡಗೋಡೆಯ ಕೋಷ್ಠ |
| ಶಿಲೆ | : | ಕಪ್ಪು |

**ವಿಗ್ರಹದ ವಿವರಣೆ**

ಉಮಾಮಹೇಶ್ವರನು ಸುಖಾಸನ ಭಂಗಿಯಲ್ಲಿ ಪೀಠದ ಮೇಲೆ ಕುಳಿತಿದ್ದು ಎಡಗಾಲನ್ನು ಮಡಚಿದ್ದು, ಬಲಗಾಲನ್ನು ಕೆಳಗೆ ಇಳಿಬಿಟ್ಟಿದ್ದಾನೆ. ಎಡಗಡೆಯ ತೊಡೆಯ ಮೇಲೆ ಉಮಾಳನ್ನು ಕೂಡ್ರಿಸಿಕೊಂಡಿರುವುದನ್ನು ಕಾಣಬಹುದು. ಈ ವಿಗ್ರಹವು ಸುತ್ತಲೂ ಪ್ರಭಾವಳಿಯನ್ನು ಹೊಂದಿದ್ದು ಮಹೇಶ್ವರನು ಕಿರೀಟಧಾರಿಯಾಗಿದ್ದಾನೆ. ಇವನು ಎರಡು ಕೈಗಳನ್ನು ಹೊಂದಿದ್ದು ಬಲಗೈ ಅಭಯ ಮುದ್ರೆಯಲ್ಲಿದ್ದು, ಎಡಗೈ ಉಮಾಳ ಹೆಗಲ ಮೇಲೆ ಇಟ್ಟಂತೆ ಕಾಣುತ್ತದೆ. ಈಗ ಅದು ಭಗ್ನವಾಗಿರುತ್ತದೆ. ಕೂದಲನ್ನು ಇಳಿಬಿಟ್ಟಿದ್ದು, ಕಿವಿಯಲ್ಲಿ ಕಿವಿಯೋಲೆಗಳನ್ನು, ಕೊರಳಲ್ಲಿ ಸರ್ಪ, ಮಣಿಸರ, ರುದ್ರಾಕ್ಷಿಗಳನ್ನು ಧರಿಸಿರುತ್ತಾನೆ. ಅಭಯ ಮುದ್ರೆಯಲ್ಲಿರುವ ಬಲಗೈಯ ಹೆಬ್ಬೆರಳಿಗೆ ಗೆಜ್ಜೆಯ ಸರವನ್ನು ಹಾಕಿರುತ್ತಾನೆ. ಕೈಗಳಲ್ಲಿ ಕೈಗಡಗ ಧರಿಸಿರುತ್ತಾನೆ.

(೩)

| | | |
|---|---|---|
| ಮೂರ್ತಿ ಶಿಲ್ಪ | : | ಷಣ್ಮುಖ |
| ಭಂಗಿ | : | ಸುಖಾಸನ |
| ಸ್ಥಳ | : | ಘೋಡಗೇರಿಯ ರಾಮಲಿಂಗೇಶ್ವರ ದೇವಾಲಯದ ಸಭಾಮಂಟಪದ ಗೋಡೆಯ ಕೋಷ್ಠದಲ್ಲಿದೆ. |
| ಶಿಲೆ | : | ಕಪ್ಪು ಶಿಲೆ |

**ವಿಗ್ರಹದ ವಿವರಣೆ**

ಷಣ್ಮುಖನು ತನ್ನ ವಾಹನವಾದ ನವಿಲಿನ ಮೇಲೆ ಸುಖಾಸನ ಭಂಗಿಯಲ್ಲಿ ಕುಳಿತಿದ್ದು ವಿಗ್ರಹವು ೬೪ ಸೆಂ.ಮೀ. ಎತ್ತರವಾಗಿದ್ದು, ೩೮ ಸೆಂ.ಮೀ. ಅಗಲವಾಗಿರುತ್ತದೆ. ಈ ಶಿಲ್ಪದಲ್ಲಿ ಷಣ್ಮುಖನು ಮೂರು ಮುಖಗಳನ್ನು ಹೊಂದಿದ್ದು ಕಿರೀಟಧಾರಿಯಾಗಿದ್ದಾನೆ. ಕೊರಳಲ್ಲಿ ಕಂಠಹಾರ ಧರಿಸಿದ್ದಾನೆ. ಕಿವಿಯಲ್ಲಿ ಕಿವಿಯೋಲೆಗಳಿರುತ್ತವೆ. ಎರಡು ಕೈಗಳಿದ್ದು ಬಲಗೈಯು ಅಭಯ ಮುದ್ರೆಯಲ್ಲಿದ್ದು ಹೆಬ್ಬರಳಿಗೆ ಗೆಜ್ಜೆಯ ಸರವನ್ನು ಹಾಕಿದ್ದಾನೆ ಪೀಠದ ಮೇಲಿರುವ ನವಿಲು ಎಡಕ್ಕೆ ಮುಖ ಮಾಡಿಕೊಂಡು ನಿಂತಿರುತ್ತದೆ.

(೪)

| | | |
|---|---|---|
| ಮೂರ್ತಿ ಶಿಲ್ಪ | : | ಭೈರವ |
| ಭಂಗಿ | : | ದ್ವಿಭಂಗಿ |
| ಸ್ಥಳ | : | ನಿಡಸೋಸಿ ಮಠದ ಪ್ರವೇಶದ್ವಾರದ ಪಕ್ಕದಲ್ಲಿ |
| ಗ್ರಾಮ | : | ನಿಡಸೋಸಿ |

**ವಿಗ್ರಹದ ವಿವರಣೆ**

ಈ ವಿಗ್ರಹ ನಿಡಸೋಸಿ ಮಠದ ಪ್ರವೇಶ ದ್ವಾರದ ಪಕ್ಕದ ಕಟ್ಟೆಯ ಮೇಲಿದೆ. ದ್ವಿಭಂಗಿಯಲ್ಲಿ ನಿಂತಿರುವ ಭೈರವನ ಶಿಲ್ಪ ನಗ್ನ ಇರುವುದು. ಭೈರವ ನಾಲ್ಕು ಕೈಗಳನ್ನು ಹೊಂದಿದ್ದು ಬಲಗೈಯಲ್ಲಿ ತ್ರಿಶೂಲ, ಖಡ್ಗ, ಎಡಗೈಯಲ್ಲಿ ಡಮರು, ರುಂಡಮಾಲೆ, ಹಿಡಿದಿರುವ

ಕೈ ಭಗ್ನವಾಗಿದೆ. ತಲೆಯ ಮೇಲೆ ಮುಕ್ಕೊಡೆ, ಕರ್ಣಕುಂಡಲ, ಕೊರಳಹಾರ, ಕಠಿಬಂದಿ, ಕೈಕಡಗ, ಕಾಲ್ಗಡಗ ಮುಂತಾದ ಆಭರಣಗಳನ್ನು ಧರಿಸಿರುವುದು ಕಂಡುಬರುತ್ತದೆ. ತೊಡೆಗೆ ಸರ್ಪ ಸುತ್ತಿರುತ್ತದೆ. ರುಂಡ ಮಾಲೆಯಿಂದ ಹನಿ ಹನಿ ಬೀಳುತ್ತಿರುವ ರಕ್ತವನ್ನು ನಾಯಿಯು ನೆಕ್ಕುತ್ತಿರುವಂತೆ ಕಾಣುತ್ತದೆ. ಈ ವಿಗ್ರಹದ ಪಕ್ಕದಲ್ಲಿ ಎರಡು ಭೂತಗಳ ಚಿತ್ರವನ್ನು ಕೆತ್ತಲಾಗಿರುತ್ತದೆ.

**ವೈಷ್ಣವ ಮೂರ್ತಿಗಳು :**

(೧)

| | | |
|---|---|---|
| ಮೂರ್ತಿ ಶಿಲ್ಪ | : | ಕೊಳಲೂದುತ್ತಿರುವ ಕೃಷ್ಣ |
| ಭಂಗಿ | : | ತ್ರಿಭಂಗಿ |
| ಸ್ಥಳ | : | ಸಂಕೇಶ್ವರ ವೀರನಾರಾಯಣ ದೇವಾಲಯದ ಉತ್ತರ ಬದಿಯ ಗೋಡೆ |
| ಶಿಲೆ | : | ಕಪ್ಪು ಶಿಲೆ |

**ವಿಗ್ರಹದ ವಿವರಣೆ**

ಈ ಮೂರ್ತಿಯು ಸುಮಾರು ಎರಡು ಅಡಿ ಎತ್ತರವಾಗಿದ್ದು ತ್ರಿಭಂಗಿಯಲ್ಲಿರುತ್ತದೆ. ಈ ಶಿಲ್ಪವನ್ನು ವೀರನಾರಾಯಣ ದೇವಾಲಯದ ಉತ್ತದ ಬದಿಯ ಗೋಡೆಯಲ್ಲಿ ಕೆತ್ತಲಾಗಿದೆ. ಎರಡು ಕೈಗಳನ್ನು ಹೊಂದಿರುವ ಕೃಷ್ಣನು ಎರಡೂ ಕೈಗಳಿಂದ ಕೊಳಲನ್ನು ಹಿಡಿದು ಊದುತ್ತಿದ್ದಾನೆ. ತಲೆಗೆ ಹಣೆಕಟ್ಟು ಕಟ್ಟಿದ್ದು ಮೇಲೆ ತುರಾಯಿಯನ್ನು ಕಾಣಬಹುದು. ಕಿವಿಗಳಲ್ಲಿ ಕಿವಿಯೋಲೆ, ಕೊರಳಲ್ಲಿ ಕಂಠಹಾರ, ಮಣಿಸರವನ್ನು ಧರಿಸಿದ್ದಾನೆ. ನಡಕ್ಕೆ ಸೊಂಟಪಟ್ಟಿಯಿದ್ದು ಎಡಗಾಲನ್ನು ಸಂಪೂರ್ಣವಾಗಿ ನೆಲಕ್ಕೆ ಊರಿದ್ದು ಬಲಗಾಲನ್ನು ಅಡ್ಡಲಾಗಿಟ್ಟು ಸ್ವಲ್ಪ ಮಡಿಚಿದ್ದು ಕಾಲ್ಬೆರಳುಗಳನ್ನು ಮಾತ್ರ ನೆಲಕ್ಕೆ ಹಚ್ಚಿದ್ದಾನೆ. ಕಾಲಲ್ಲಿ ಕಾಲ್ಗಡಗ ಮತ್ತು ಕೈಗಳಲ್ಲಿ ಕೈಗಡಗ ಹಾಗೂ ತೋಳುಗಳಲ್ಲಿ ತೋಳ್ಬಂದಿಯನ್ನು ಕಾಣಬಹುದು. ಇವನು ಪ್ರಣಯ ಭಂಗಿಯಲ್ಲಿ ಮುರಳಿ ನುಡಿಸುತ್ತಿರುವಂತೆ ತೋರುತ್ತದೆ.

(೨)

| | | |
|---|---|---|
| ಮೂರ್ತಿ ಶಿಲ್ಪ | : | ವಿಷ್ಣು |
| ಭಂಗಿ | : | ನಿಂತ |
| ಸ್ಥಳ | : | ಘೋಡಗೇರಿಯ ರಾಮಲಿಂಗೇಶ್ವರ ದೇವಾಲಯದ ಸಭಾಮಂಟಪದ ಎಡಕೋಷ್ಠಕದಲ್ಲಿದೆ |
| ಶಿಲೆ | : | ಕಪ್ಪು ಶಿಲೆ |

**ವಿಗ್ರಹದ ವಿವರಣೆ**

ಈ ವಿಗ್ರಹವು ೭೨ ಸೆಂ.ಮೀ. ಎತ್ತರವಾಗಿದ್ದು ೩೮ ಸೆಂ.ಮೀ. ಅಗಲವಾಗಿದೆ. ವಿಷ್ಣು ಚತುರ್ಭುಜನಾಗಿದ್ದು ಬಲಗಡೆಯ ಕೈಯಲ್ಲಿ ಚಕ್ರವನ್ನು ಹಿಡಿದಿದ್ದು ಕೆಳಗಿನ ಕೈಯು ಅಭಯ

ಮುದ್ರೆಯಲ್ಲಿರುತ್ತದೆ. ಎಡಗಡೆಯ ಮೇಲಿನ ಕೈಯಲ್ಲಿ ಶಂಖ ಮತ್ತು ಕೆಳಗಿನ ಕೈಯಲ್ಲಿ ಪುಷ್ಪಗೊಂಚಲವನ್ನು ಹಿಡಿದಿರುತ್ತಾನೆ. ವಿಷ್ಣುವಿನ ಹಿಂಭಾಗದಲ್ಲಿ ಸುತ್ತಲೂ ಪ್ರಭಾವಳಿಯಿರುತ್ತದೆ. ತಲೆಯ ಮೇಲೆ ಕಿರೀಟವನ್ನು ಹೊಂದಿದ್ದು ಶಿರದ ಸುತ್ತಲೂ ವೃತ್ತಾಕಾರದ ಪ್ರಭಾಮಂಡಲವನ್ನು ಕಾಣಬಹುದು. ಕಿವಿಯಲ್ಲಿ ಕಿವಿಯೋಲೆ, ಕೊರಳಲ್ಲಿ ಕಂಠಹಾರ, ಮಣಿಸರ, ಧರಿಸಿದ್ದಾನೆ. ಸೊಂಟದಲ್ಲಿ ನಡುಪಟ್ಟಿಯಿರುತ್ತದೆ. ನಾಲ್ಕು ಕೈಗಳಲ್ಲಿ ಕೈಕಡಗಗಳನ್ನು ಧರಿಸಿರುತ್ತಾನೆ. ಕಾಲಲ್ಲಿ ಕಾಲ್ಗಡಗಗಳಿರುತ್ತವೆ. ವಿಷ್ಣುವಿನ ಪಾದದ ಬಲಬದಿಯಲ್ಲಿ ಇವನ ವಾಹನವಾದ ಗರುಡಶಿಲ್ಪ (ಮೂರ್ತಿ)ವನ್ನು ಕಾಣಬಹುದು ಮತ್ತು ಎಡಬದಿಯಲ್ಲಿ ತ್ರಿಭಂಗಿಯಲ್ಲಿರುವ ಚಿಕ್ಕ ಸ್ತ್ರೀ ಶಿಲ್ಪವನ್ನು ಕಾಣಬಹುದು.

(೩)

| | | |
|---|---|---|
| ಮೂರ್ತಿ ಶಿಲ್ಪ | : | ವೇಣುಗೋಪಾಲ |
| ಭಂಗಿ | : | ಸುಖಾಸನ |
| ಸ್ಥಳ | : | ಯಮಕನಮರಡಿ ವೇಣುಗೋಪಾಲ ದೇವಾಲಯದ ಗರ್ಭಗೃಹ |
| ಶಿಲೆ | : | ಕಪ್ಪು ಶಿಲೆ |

**ವಿಗ್ರಹದ ವಿವರಣೆ**

ವೇಣುಗೋಪಾಲ ದೇವಾಲಯದ ಗರ್ಭಗೃಹದಲ್ಲಿ ಪೂರ್ವಾಭಿಮುಖವಾಗಿ ಈ ವಿಗ್ರಹವಿರುತ್ತದೆ. ಇದು ೬೮ ಸೆಂ.ಮೀ. ಎತ್ತರ, ೪೦ ಸೆಂ.ಮೀ. ಅಗಲವಿದೆ. ವಿಷ್ಣುವು ಸುಖಾಸೀನ ಭಂಗಿಯಲ್ಲಿ ಕುಳಿತಿದ್ದು ಚತುರ್ಭುಜಗಳನ್ನು ಹೊಂದಿದ್ದಾನೆ. ಶಿರದ ಹಿಂಭಾಗದಲ್ಲಿ ಪ್ರಭಾವಳಿಯಿದ್ದು ಅದರಲ್ಲಿ ಕೀರ್ತಿಮುಖದ ಅಲಂಕರಣೆ ಇರುತ್ತದೆ. ಬಲಗಡೆಯ ಮೇಲಿನ ಕೈಯಲ್ಲಿ ಚಕ್ರವಿದ್ದು ಶಂಖ, ಕೆಳಗಿನ ಕೈಯಲ್ಲಿ ತೊಡೆಯ ಮೇಲೆ ಕುಳಿತಿರುವ ಸ್ತ್ರೀ(ಲಕ್ಷ್ಮಿ)ಯನ್ನು ಹಿಡಿದಿದ್ದಾನೆ.

ವಿಷ್ಣು ಕಿರೀಟಧಾರಿಯಾಗಿದ್ದು, ಕಿವಿಯೋಲೆ, ಕೊರಳಲ್ಲಿ ಕಂಠಹಾರ, ಮಣಿಸರ, ಯಜ್ಞೋಪವೀತಹಾರಗಳನ್ನು ಧರಿಸಿದ್ದಾನೆ. ಕೈಕಡಗ, ಕಾಲ್ಗಡಗ, ಬೆರಳುಗಳಲ್ಲಿ ಬೆರಳುಂಗರಗಳನ್ನು ಕಾಣಬಹುದು. ನಡುಪಟ್ಟಿ, ಕಟಿವಸ್ತ್ರ ಧರಿಸಿದ್ದಾನೆ. ಇವರ ಎಡಪಾದದ ಬಳಿ ಒಂದು ಚಿಕ್ಕ ಶಿಲ್ಪವನ್ನು ಕಾಣಬಹುದು.

(೪)

| | | |
|---|---|---|
| ಮೂರ್ತಿ ಶಿಲ್ಪ | : | ವಿಷ್ಣು ನಾರಾಯಣ |
| ಭಂಗಿ | : | ನಿಂತ |
| ಸ್ಥಳ | : | ಸಂಕೇಶ್ವರದ ಶಂಕರಲಿಂಗ ದೇವಾಲಯದ ನವರಂಗದ ಗೂಡಿನಲ್ಲಿದೆ. |
| ಶಿಲೆ | : | ಕಪ್ಪು ಶಿಲೆ |

**ವಿಗ್ರಹದ ವಿವರಣೆ**

ಸಂಕೇಶ್ವರದ ದೇವಾಲಯದ ನವರಂಗದ ಒಂದು ಗೂಡು ಅಥವಾ ಕೋಷ್ಠಕದಲ್ಲಿರುತ್ತದೆ. ಈ ವಿಗ್ರಹವು ನಿಂತ ಭಂಗಿಯಲ್ಲಿದ್ದು ವಿಷ್ಣುನಾರಾಯಣನು ಚತುರ್ಭುಜನಾಗಿದ್ದಾನೆ. ಬಲಬದಿಯ ಮೇಲಿನ ಕೈಯಲ್ಲಿ ಪದ್ಮವನ್ನು ಹಿಡಿದಿದ್ದಾನೆ. ಕೆಳಗಿನ ಕೈಯಲ್ಲಿ ಚಕ್ರವನ್ನು ಹಿಡಿದಿದ್ದಾನೆ. ಮೂರ್ತಿಯ ತಲೆಯ ಮೇಲೆ ಕಿರೀಟವಿದ್ದು ಕೊರಳಹಾರ, ಕೈಗಡಗ ಮತ್ತು ಕಾಲ್ಗಡಗಗಳಿಂದ ಅಲಂಕೃತನಾಗಿದ್ದಾನೆ.

(೫)

| | | |
|---|---|---|
| ಮೂರ್ತಿ ಶಿಲ್ಪ | : | ನಾರಾಯಣ |
| ಭಂಗಿ | : | ನಿಂತ |
| ಸ್ಥಳ | : | ಸಂಕೇಶ್ವರದ ನಾರಾಯಣ ದೇವಾಲಯದ ಗರ್ಭಗೃಹದಲ್ಲಿರುತ್ತದೆ. |
| ಶಿಲೆ | : | ಕಪ್ಪು ಶಿಲೆ |

**ವಿಗ್ರಹದ ವಿವರಣೆ**

ನಾರಾಯಣ ವಿಗ್ರಹವು ಪೂರ್ವಾಭಿಮುಖವಾಗಿರುವ ನಾರಾಯಣ ದೇವಾಲಯದ ಗರ್ಭಗೃಹದಲ್ಲಿರುತ್ತದೆ. ವೀರನಾರಾಯಣ ವಿಗ್ರಹವು ೨'-೧೦" ಎತ್ತರ ಮತ್ತು ೧'-೬" ಅಗಲವಾಗಿರುತ್ತದೆ.

ನಾರಾಯಣನು ನಿಂತ ಭಂಗಿಯಲ್ಲಿದ್ದು ಚತುರ್ಭುಜನಾಗಿದ್ದಾನೆ. ಬಲಬದಿಯ ಮೇಲಿನ ಕೈಯಲ್ಲಿ ಮತ್ತು ಕೆಳಗಿನ ಕೈಯಲ್ಲಿ ಸರ್ಪವಿರುತ್ತದೆ. ಎಡಬದಿಯ ಮೇಲಿನ ಕೈಯಲ್ಲಿ ಗದೆಯನ್ನು ಹಿಡಿದುಕೊಂಡಿದ್ದು, ಕೆಳಗಿನ ಕೈಯಲ್ಲಿ ಕಮಲವನ್ನು ಹಿಡಿದುಕೊಂಡಿದ್ದಾನೆ. ತಲೆಯ ಮೇಲೆ ಕಿರೀಟ, ಕೊರಳಹಾರ, ತುಳಸಿಮಾಲೆ, ಕಾಲ್ಗಡಗ, ಕೈಗಡಗ, ತೋಳಬಂಧಿ ಹಾಗೂ ನಡುಪಟ್ಟಿಕೆಗಳನ್ನು ಧರಿಸಿರುತ್ತಾನೆ.

ನಾರಾಯಣ ಮೂರ್ತಿಯ ಕಾಲುಗಳ ಬದಿಯಲ್ಲಿ ಎಡ ಮತ್ತು ಬಲಬದಿಯಲ್ಲಿ ಭೂದೇವಿ ಮತ್ತು ಶ್ರೀದೇವಿಯರ ಚಿಕ್ಕ ವಿಗ್ರಹಗಳಿವೆ.

**ಶಾಕ್ತ ದೇವತೆಗಳು**

(೧)

| | | |
|---|---|---|
| ವಿಗ್ರಹ | : | ಗಜಲಕ್ಷ್ಮೀ |
| ಭಂಗಿ | : | ನಿಂತ |
| ಸ್ಥಳ | : | ಹಾಲಬಸವೀಶ ಗುಡಿಯ ಮುಂದೆ |
| ಶಿಲೆ | : | ಕಪ್ಪು ಶಿಲೆ |

**ವಿಗ್ರಹದ ವಿವರಣೆ**

ಈ ಗಜಲಕ್ಷ್ಮೀ ಶಿಲ್ಪವು ಅರ್ಜುನವಾಡ ಹಾಲಬಸವೀಶ ಗುಡಿಯ ಹಿಂದೆ ಹಾಳು

ಮಣ್ಣಿನಲ್ಲಿ ಉತ್ಖನನ ಮಾಡುವಾಗ ದೊರಕಿರುತ್ತದೆ. ಸಮುದ್ರ ಮಂಥನ ಮಾಡುತ್ತಿರುವ ಗಜಲಕ್ಷ್ಮಿ ಕಮಲದ ಮೇಲೆ ಪದ್ಮಾಸನದಲ್ಲಿ ಕುಳಿತಿದ್ದಾಳೆ. ಈಕೆ ಚತುರ್ಭುಜಳಾಗಿದ್ದು ಬಲಬದಿಯ ಕೆಳಗಿನ ಕೈ ಅಭಯ ಹಸ್ತವಿದ್ದು, ಎಡಬದಿಯ ಕೆಳಗಿನ ಕೈಯಲ್ಲಿ ಪದ್ಮವನ್ನು ಹಿಡಿದಿರುತ್ತಾಳೆ. ಇನ್ನೆರಡು ಕೈಗಳು ಭಗ್ನವಾಗಿರುತ್ತವೆ.

ಗಜಲಕ್ಷ್ಮೀಯ ಬದಿಗೆ (ಪಕ್ಕದಲ್ಲಿ) ಎರಡು ಆನೆಗಳ ಚಿತ್ರಗಳಿವೆ. ಇವು ಸುಂದರವಾದ ಅಲಂಕಾರದಿಂದ ಕೂಡಿವೆ. ಈ ಎರಡು ಆನೆಗಳನ್ನು ತಮ್ಮ ಸೊಂಡಿಲಿನಿಂದ ಅಭಿಷೇಕ ಮಾಡುತ್ತಿರುವಂತೆ ಕೆತ್ತಲಾಗಿದೆ. ಗಜಲಕ್ಷ್ಮೀ ಧ್ಯಾನಾಕಸ್ತ ರೂಪದಲ್ಲಿ ಕುಳಿತಿರುವಳು. ತಲೆಯ ಮೇಲೆ ಕಿರೀಟ, ಕೊರಳಲ್ಲಿ ಮತ್ತು ಕೈಕಾಲುಗಳಲ್ಲಿ ಆಭರಣಗಳನ್ನು ಧರಿಸಿರುವುದನ್ನು ಕಾಣಬಹುದು. ಆನೆಗಳ ಕೊರಳಲ್ಲಿ ಸರವಿರುವುದನ್ನು ಕಾಣಬಹುದು. ಗಜಗಳು ನಿಂತ ಭಂಗಿಯಲ್ಲಿದ್ದು ಮುಂದಿನ ಕಾಲುಗಳನ್ನು ಸ್ವಲ್ಪ ಎತ್ತರಿಸಿರುತ್ತವೆ. ಈ ವಿಗ್ರಹವು ಅರ್ಧಚಂದ್ರಾಕೃತಿಯಲ್ಲಿ ನಿರ್ಮಿತವಾಗಿದೆ.

ಇದು ಉಬ್ಬುಶಿಲ್ಪದಲ್ಲಿ ಇರುವುದರಿಂದ ಸ್ಪಷ್ಟವಾಗಿ ಗುರುತಿಸಲಿಕ್ಕೆ ಅನುಕೂಲವಾಗಿದೆ.

(೨)

ವಿಗ್ರಹ : ಸಪ್ತಮಾತೃಕತೆಯರು
ಸ್ಥಳ : ರಾಮಲಿಂಗೇಶ್ವರ ದೇವಾಲಯದ ಸಭಾಮಂಟಪದಲ್ಲಿ
ಗ್ರಾಮ : ಶಿಪ್ಪೂರು

**ವಿಗ್ರಹದ ವಿವರಣೆ**

ಈ ಸಪ್ತಮಾತೃಕೆಯರ ವಿಗ್ರಹ ಶಿಪ್ಪೂರ ಗ್ರಾಮದ ಪೂರ್ವ ದಿಕ್ಕಿನಲ್ಲಿರುವ ದಟ್ಟ ಅರಣ್ಯದಲ್ಲಿ ರಾಮಲಿಂಗೇಶ್ವರ ಎಂಬ ಪ್ರಾಚೀನ ಕಾಲದ ದೇವಾಲಯವಿದೆ. ಈ ದೇವಾಲಯದ ಸಭಾಮಂಟಪದಲ್ಲಿ ಸಪ್ತಮಾತೃಕೆಯರ ವಿಗ್ರಹವನ್ನಿಡಲಾಗಿದೆ. ಒಂದೇ ಕಲ್ಲಿನಲ್ಲಿ ಸಾಲಾಗಿ ಚಿಕ್ಕ ಮೂರ್ತಿಗಳನ್ನು ಕೆತ್ತಲಾಗಿದೆ. ಅವುಗಳು ಕ್ರಮವಾಗಿ ವೀರಭದ್ರ, ಬ್ರಾಹ್ಮಿಣಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡಿ, ಗಣೇಶ ಈ ರೀತಿ ಇವೆ. ಪ್ರತಿ ಮೂರ್ತಿಯ ಪೀಠದ ಕೆಳಭಾಗದಲ್ಲಿ ಅವರ ವಾಹನಗಳಿದ್ದು, ಅವುಗಳ ಆಧಾರದ ಮೇಲೆ ಗುರುತಿಸಲಾಗಿದೆ. ಇನ್ನೂ ಇಂತಹ ಸಪ್ತಮಾತೃಕೆಯರ ವಿಗ್ರಹಗಳು ಹುಕ್ಕೇರಿ ಸುತ್ತಮುತ್ತಲಿನ ಗ್ರಾಮಗಳಾದ ಘೋಡಗೇರಿ, ಬೆಳವಿ, ಅಮ್ಮಣಗಿ, ಅರ್ಜುನವಾಡ, ಕಣಗಲಾದಲ್ಲಿ ದೊರಕಿವೆ. ಆದರೆ ಅವು ಭಗ್ನಗೊಂಡಿವೆ.

(೩)

ಮೂರ್ತಿ ಶಿಲ್ಪ : ಮಹಿಷಾಸುರ ಮರ್ದಿನಿ
ಭಂಗಿ : ತ್ರಿಭಂಗಿ
ಕಾಲ : ೯-೧೦ನೆಯ ಶತಮಾನ

| | | |
|---|---|---|
| ಶಿಲೆ | : | ಬಿಳಿ ಶಿಲೆ |
| ಸ್ಥಳ | : | ರಾಮಲಿಂಗೇಶ್ವರ ದೇವಾಲಯ ಸಧ್ಯಕ್ಕೆ ನಿಡಸೋಸಿ ಮಠದ ದ್ವಾರ ಬಾಗಿಲದ ಕಟ್ಟೆ ಮೇಲಿದೆ. |

**ಮೂರ್ತಿಯ ವಿವರಣೆ**

ಪ್ರಾಚೀನ ಕಾಲದ ರಾಮಲಿಂಗೇಶ್ವರ ದೇವಾಲಯದಲ್ಲಿ ದೊರೆತಿರುವ ಮಹಿಷಮರ್ದಿನಿ ವಿಗ್ರಹವು ಅಪರೂಪ ಶಿಲ್ಪವಾಗಿದೆ. ಇದು ೧೧೦ ಸೆಂ.ಮೀ. ಎತ್ತರ, ೬೪ ಸೆಂ.ಮೀ. ಅಗಲವಿದ್ದು, ಕ್ರಿ.ಶ.ಸು. ೯–೧೦ನೆಯ ಶತಮಾನದ್ದು. ಅಷ್ಟಭುಜಗಳನ್ನು ಹೊಂದಿದೆ. ಮುಂದಿನ ಎಡ ಮತ್ತು ಬಲ ಕೈಗಳಲ್ಲಿ ತ್ರಿಶೂಲವನ್ನು ಹಿಡಿದಿರುತ್ತಾಳೆ. ಬಲಬದಿಯ ಹಿಂದಿನ ಕೈಗಳಲ್ಲಿ ಖಡ್ಗ, ಶಂಖ ಹಾಗೂ ಎಡಬದಿಯ ಕೈಗಳಲ್ಲಿ ಡಾಲು, ಪದ್ಮ ಇದೆ. ಹಿಂದಿನ ಬಲ ಮತ್ತು ಎಡ ಕೈಗಳಲ್ಲಿರುವ ಆಯುಧಗಳನ್ನು ಗುರುತಿಸಲಿಕ್ಕೆ ಸಾಧ್ಯವಿಲ್ಲ.

ತ್ರಿಭಂಗಿಯಲ್ಲಿರುವ ದೇವಿಯು ತನ್ನ ಎಡಗಾಲನ್ನು ಮಹೇಶನ ಬೆನ್ನಿನ ಮೇಲೆ ಅದುಮಿ ತನ್ನ ಮೊದಲಿನ ಎರಡು ಕೈಗಳಲ್ಲಿ ತ್ರಿಶೂಲದಿಂದ ಅಸುರನ ಹೊಟ್ಟೆಯೊಳಗೆ ಇರಿಯಲಾಗಿದೆ. ಅಸುರನ ಕೈಗಳಲ್ಲಿ ಕತ್ತಿ ಮತ್ತು ಡಾಲನ್ನು ಹಿಡಿದಿರುತ್ತಾನೆ. ಈತನು ಮುಕುಟ ಕಿರೀಟ ಧಾರಿಯಾಗಿದ್ದು, ದೇವಿಯ ಬಲಬದಿಯಲ್ಲಿ ಅವಳ ವಾಹನ ಸಿಂಹದ ಚಿತ್ರವಿರುತ್ತದೆ. ದೇವಿಯ ಕಿವಿಯಲ್ಲಿ ಕಿವಿಯೋಲೆ, ಕೊರಳಹಾರ, ಕೈಗಡಗ, ಕಾಲ್ಗಡಗ ಧರಿಸಿರುತ್ತಾಳೆ ಮತ್ತು ಮುಂದಕ್ಕೆ ಚೆನ್ನಾಗಿ ತೀಡಿ ನೆರಿಗೆಯುಳ್ಳ ಉಡಿಗೆ ಮೂರ್ತಿಯನ್ನು ಅಲಂಕರಿಸಿದೆ. ಈ ಮೂರ್ತಿಯ ಮೇಲ್ಭಾಗದಲ್ಲಿ ಪ್ರಭಾವಳಿಯಿದೆ.

**ಗಾಣಪತ್ಯ ವಿಗ್ರಹಗಳು**

| | | |
|---|---|---|
| ವಿಗ್ರಹ | : | ಗಣೇಶ |
| ಭಂಗಿ | : | ಸವ್ಯ ಲಲಿತಾಸನ |
| ಸ್ಥಳ | : | ನಿಡಸೋಸಿ ಮಠದ ಪ್ರವೇಶದ್ವಾರದ ಪಕ್ಕದಲ್ಲಿ |
| ಕಾಲ | : | ಕ್ರಿ.ಶ. ೧೦–೧೧ ನೆಯ ಶತಮಾನ |
| ಗ್ರಾಮ | : | ನಿಡಸೋಸಿ |

**ಮೂರ್ತಿಶಿಲ್ಪದ ವಿವರಣೆ**

ಈ ಗಣೇಶ ವಿಗ್ರಹ ಪ್ರಾಚೀನ ಕಾಲದ ರಾಮಲಿಂಗೇಶ್ವರ ದೇವಾಲಯದಲ್ಲಿ ದೊರೆತಿದೆ. ಈಗ ಆ ದೇವಾಲಯವನ್ನು ಹೊಸದಾಗಿ ಕಟ್ಟುತ್ತಿರುವುದರಿಂದ ನಿಡಸೋಸಿ ಮಠದ ಪ್ರವೇಶ ದ್ವಾರದ ಪಕ್ಕದ ಕಟ್ಟೆಯ ಮೇಲೆ ಇಡಲಾಗಿದೆ. ಇದು ೮೪ ಸೆಂ.ಮೀ. ಎತ್ತರ, ೬೨ ಸೆಂ.ಮೀ. ಅಗಲ, ತಲೆಯ ಮೇಲೆ ಕಿರೀಟವಿರುತ್ತದೆ. ಈ ವಿಗ್ರಹವು ಚತುರ್ಭುಜಗಳನ್ನು ಹೊಂದಿದೆ. ಬಲಬದಿ ಮೇಲಿನ ಕೈಯಲ್ಲಿ ಪರಶು ಕೆಳಗಿನ ಕೈಯಲ್ಲಿ ಶಂಖ, ಎಡಬದಿ ಮೇಲಿನ ಕೈಯಲ್ಲಿ ಪದ್ಮ ಕೆಳವಿನ ಕೈಯಲ್ಲಿ ಮೋದಕವಿದೆ. ಕೊರಳಹಾರ, ಉದರಬಂಧಿ, ಕಾಲ್ಗಡಗ ಧರಿಸಿರುವುದು ಕಂಡುಬರುತ್ತದೆ.

## ಜೈನಮೂರ್ತಿ ಶಿಲ್ಪಗಳು

(೧)

| | | |
|---|---|---|
| ವಿಗ್ರಹ | : | ಪಾರ್ಶ್ವನಾಥ |
| ಭಂಗಿ | : | ಖಡ್ಗಾಸನ ಅಥವಾ ಸಿದ್ಧಾಸನ |
| ಸ್ಥಳ | : | ಬೆಳವಿ ಜೈನ ಬಸದಿಯ ಮುಂದೆ |
| ಕಾಲ | : | ೧೦-೧೧ನೆಯ ಶತಮಾನ |

### ವಿಗ್ರಹದ ವಿವರಣೆ

ಪಾರ್ಶ್ವನಾಥ ವಿಗ್ರಹವು ೯೪ ಸೆಂ.ಮೀ. ಎತ್ತರ, ೫೬ ಸೆಂ.ಮೀ. ಅಗಲವಿದ್ದು, ಇದು ಕಪ್ಪುಶಿಲೆಯಲ್ಲಿ ನಿರ್ಮಿತವಾಗಿದ್ದು, ವಿಗ್ರಹದ ಅಡಿಯಿಂದ ಮುಡಿಯವರೆಗೆ ಸುರುಳಿಯಾಕಾರದ ಏಳು ಹೆಡೆಯ ಹಾವಿನ ಕೆತ್ತನೆಯಿದೆ. ಸರ್ಪದ ತಲೆಯ ಮೇಲೆ ಕೊಡೆಯಾಕಾರದ ಮೂರು ಭಾಗಗಳನ್ನು ಕಾಣಬಹುದು. ವಿಗ್ರಹವು ನಿಂತ ಭಂಗಿಯಲ್ಲಿದೆ. ಎರಡು ಕೈಗಳು ನೀಳವಾಗಿ ಇಳಿಬಿಟ್ಟಿವೆ. ಈ ವಿಗ್ರಹದಲ್ಲಿ ಎರಡು ಭಾಗಗಳಿದ್ದು ಕೆಳಗಿನ ಪಟ್ಟಿಯಲ್ಲಿ ಯಕ್ಷ-ಯಕ್ಷಿಯರ ಪೂರ್ಣ ಚಿತ್ರಗಳನ್ನು ಕೆತ್ತಲಾಗಿದೆ. ಮೇಲಿನ ಪಟ್ಟಿಯಲ್ಲಿ (ವಿಗ್ರಹದ ತಲೆಯ ಎರಡೂ ಬದಿಗೆ) ಯಕ್ಷ-ಯಕ್ಷಿಯರ ಅರ್ಧ ಚಿತ್ರವನ್ನು ಕೆತ್ತಲಾಗಿದೆ. ಅವು ವಿವಿಧ ಆಭರಣಗಳಿಂದ ಅಲಂಕೃತವಾಗಿದೆ. ಈ ವಿಗ್ರಹದ ಕೆಳಗೆ ಅಸ್ಪಷ್ಟ ಲಿಪಿಯಿದೆ.

(೨)

| | | |
|---|---|---|
| ವಿಗ್ರಹ | : | ನೇಮಿನಾಥ |
| ಭಂಗಿ | : | ಸಿದ್ಧಾಸನ ಅಥವಾ ಖಡ್ಗಾಸನ |
| ಸ್ಥಳ | : | ಎಲಿಮುನ್ನೋಳಿ ಜೈನಬಸದಿಯ ಗರ್ಭಗೃಹದಲ್ಲಿ |
| ಕಾಲ | : | ಕ್ರಿ.ಶ. ೧೧ನೆಯ ಶತಮಾನ |

### ಮೂರ್ತಿಶಿಲ್ಪದ ವಿವರಣೆ

ಈ ಮೂರ್ತಿಯು ಗ್ರಾಮದ ಮಧ್ಯದಲ್ಲಿ ಹೊಸದಾಗಿ ಕಟ್ಟಿಸಲಾದ ಬಸದಿಯಲ್ಲಿದೆ. ಈ ಬಸದಿಯ ಗರ್ಭಗೃಹದಲ್ಲಿ ೨೨ನೆಯ ತೀರ್ಥಂಕರನಾದ ನೇಮಿನಾಥ ಸಿದ್ಧಾಸನದ ಕಪ್ಪುಶಿಲೆಯ ಸುಂದರವಾದ ಮೂರ್ತಿಯಿದ್ದು, ಇದು ೧೦೭ ಸೆಂ.ಮೀ. ಎತ್ತರವಿದ್ದು ನೇರ ಮೂಗು, ಗುಂಗುರು ಕೂದಲು, ಧ್ಯಾನ ಮುಖಮುದ್ರೆಯೊಂದಿಗೆ ಮೂರ್ತಿ ಆಕರ್ಷಕವಾಗಿದೆ. ಪಾದಪೀಠದಲ್ಲಿ ಅಸ್ಪಷ್ಟ ಶಾಸನವಿರುತ್ತದೆ.

(೩)

| | | |
|---|---|---|
| ವಿಗ್ರಹ | : | ಆದಿನಾಥ |
| ಭಂಗಿ | : | ಧ್ಯಾನಾಸಕ್ತ ಭಂಗಿ |
| ಸ್ಥಳ | : | ಆದಿನಾಥ ಬಸದಿಯ ಗರ್ಭಗೃಹದಲ್ಲಿ |
| ಗ್ರಾಮ | : | ಬೆಲ್ಲದ ಬಾಗೇವಾಡಿ |

**ಮೂರ್ತಿಶಿಲ್ಪದ ವಿವರಣೆ**

ಪ್ರಥಮ ತೀರ್ಥಂಕರನಾದ ಆದಿನಾಥ ಅಥವಾ ಋಷಭನಾಥನ ಧ್ಯಾನಾಸಕ್ತ ವಿಗ್ರಹ ಬೆಲ್ಲದ ಬಾಗೇವಾಡಿ ಜೈನ ಬಸದಿಯ ಗರ್ಭಗೃಹದಲ್ಲಿದೆ. ಇದು ೭೨ ಸೆಂ.ಮೀ. ಎತ್ತರ ೫೪ ಸೆಂ.ಮೀ. ಅಗಲವಿದೆ. ಈ ಮೂರ್ತಿಯ ಬಲಬದಿ ಯಕ್ಷ ಧರಣೇಂದ್ರ, ಎಡಬದಿ ಯಕ್ಷಿ ಪದ್ಮಾವತಿಯ ಮೂರ್ತಿಗಳಿವೆ. ಇವು ತ್ರಿಭಂಗಿಯಲ್ಲಿದ್ದು ತುಂಬಾ ಅಲಂಕೃತವಾಗಿದೆ. ಈ ಮೂರ್ತಿಯ ಹಿಂದಿನ ಪ್ರಭಾವಳಿಯಲ್ಲಿ ಇನ್ನುಳಿದ ೨೩ ತೀರ್ಥಂಕರರ ಧ್ಯಾನಾಸಕ್ತ ಚಿಕ್ಕ ಚಿಕ್ಕ ಮೂರ್ತಿಗಳಿವೆ.

(೪)

| | | |
|---|---|---|
| ವಿಗ್ರಹ | : | ಚೌವೀಸ್ ತೀರ್ಥಂಕರರ ವಿಗ್ರಹ |
| ಸ್ಥಳ | : | ಆದಿನಾಥ ಬಸದಿ |
| ಗ್ರಾಮ | : | ಬೆಲ್ಲದ ಬಾಗೇವಾಡಿ |

**ಮೂರ್ತಿಶಿಲ್ಪದ ವಿವರಣೆ**

ಚೌವೀಸ್ ತೀರ್ಥಂಕರರ ವಿಗ್ರಹ ಬೆಲ್ಲದ ಬಾಗೇವಾಡಿಯ ಜೈನಬಸದಿಯಲ್ಲಿದೆ. ಇದು ೪೪ ಸೆಂ.ಮೀ. ಎತ್ತರ ೩೫ ಸೆಂ.ಮೀ. ಅಗಲವಿದ್ದು ಮಧ್ಯದಲ್ಲಿ ಮೂರನೆಯ ತೀರ್ಥಂಕರನಾದ ಋಷಭನಾಥ ಅಥವಾ ಆದಿನಾಥನ ಖಡ್ಗಾಸನ ಭಂಗಿಯಲ್ಲಿರುವ ಚಿತ್ರ, ಇದರ ಸುತ್ತಲೂ ಧ್ಯಾನಾಸಕ್ತರಾಗಿ ಕುಳಿತಿರುವ ೨೩ ತೀರ್ಥಂಕರರ ಚಿಕ್ಕ ಶಿಲ್ಪಗಳನ್ನು ಕೆತ್ತಲಾಗಿದೆ. ಮೇಲಿನ ಐದು ಮೂರ್ತಿಗಳ ಮೇಲೆ ಕೊಡೆಯಿದೆ. ವಿಗ್ರಹದ ಮೇಲ್ಭಾಗದಲ್ಲಿ ಪ್ರಭಾವಳಿ ಇದೆ.

(೫)

| | | |
|---|---|---|
| ವಿಗ್ರಹ | : | ಪಾರ್ಶ್ವನಾಥ |
| ಭಂಗಿ | : | ಖಡ್ಗಾಸನ |
| ಸ್ಥಳ | : | ಸಂಕೇಶ್ವರ ಪಾರ್ಶ್ವನಾಥ ಬಸದಿಯ ಸಭಾಮಂಟಪದಲ್ಲಿ |
| ಕಾಲ | : | ಕ್ರಿ.ಶ.ಸು. ೧೦-೧೧ನೆಯ ಶತಮಾನ |
| ಪಟ್ಟಣ | : | ಸಂಕೇಶ್ವರ (ಹುಕ್ಕೇರಿಯಿಂದ ೧೩ ಕಿ.ಮೀ. ದೂರ) |

**ವಿಗ್ರಹದ ವಿವರಣೆ**

ಪಾರ್ಶ್ವನಾಥ ವಿಗ್ರಹವು ಖಡ್ಗಾಸನ ಭಂಗಿಯಲ್ಲಿದ್ದು ಇದು ೧೨೬ ಸೆಂ.ಮೀ. ಎತ್ತರ, ೫೧ ಸೆಂ.ಮೀ. ಅಗಲ ಇದರ ಸುತ್ತಲೂ ಪ್ರಭಾವಳಿಯಿದ್ದು ಮಧ್ಯದಲ್ಲಿ ಕೀರ್ತಿ ಮುಖದ ಅಲಂಕರಣೆಯನ್ನು ಕಾಣಬಹುದು. ಪಾರ್ಶ್ವನಾಥನ ಹಿಂಭಾಗದಲ್ಲಿ ಅಡಿಯಿಂದ ಮುಡಿಯವರೆಗಿನ ಏಳು ಹೆಡೆಯ ಸರ್ಪದ ಚಿತ್ರವನ್ನು ಕೆತ್ತಲಾಗಿದೆ. ಈ ವಿಗ್ರಹದ ಬಲಬದಿ ಯಕ್ಷ ಧರಣೇಂದ್ರ ಎಡಬದಿ ಯಕ್ಷಿ ಪದ್ಮಾವತಿಯರ ಲಲಿತಾಸನದ ಅಲಂಕೃತ ಚಿಕ್ಕ ಮೂರ್ತಿಗಳಿವೆ. ಪಾದಪೀಠದಲ್ಲಿದ್ದ ಶಾಸನ ತ್ರುಟಿತಗೊಂಡಿದೆ.

(೬)

| | | |
|---|---|---|
| ಮೂರ್ತಿಶಿಲ್ಪ | : | ಪಾರ್ಶ್ವನಾಥ |
| ಭಂಗಿ | : | ಖಡ್ಗಾಸನ |
| ಸ್ಥಳ | : | ಅಮ್ಮಣಗಿಯ ಪಾರ್ಶ್ವನಾಥ ಬಸದಿಯ ಗರ್ಭಗೃಹ |
| ಬಳಸಿದ ಶಿಲೆ | : | ಕಪ್ಪು |

**ಮೂರ್ತಿಶಿಲ್ಪದ ವಿವರಣೆ**

ಪಾರ್ಶ್ವನಾಥ ವಿಗ್ರಹವು ಅಮ್ಮಣಗಿಯ ಪಾರ್ಶ್ವನಾಥ ಬಸದಿಯ ಗರ್ಭಗೃಹದಲ್ಲಿದ್ದು ಇದು ೧೨೨ ಸೆಂ.ಮೀ. ಎತ್ತರವಿರುತ್ತದೆ. ವಿಗ್ರಹದ ತಲೆಯ ಮೇಲೆ ಅಡಿಯಿಂದ ಮುಡಿಯವರೆಗಿನ ೭ (ಏಳು) ಹೆಡೆಯ ಸರ್ಪವಿರುತ್ತದೆ. ಸರ್ಪದ ತಲೆಯ ಮೇಲೆ ಛತ್ರದ ಕೆತ್ತನೆಯಿದ್ದು ಅದರ ಮೇಲ್ಭಾಗದಲ್ಲಿ ಕೀರ್ತಿಮುಖದ ಕೆತ್ತನೆಯನ್ನು ಹೊಂದಿರುತ್ತದೆ. ಪಾರ್ಶ್ವನಾಥನು ಎರಡೂ ಕೈಗಳನ್ನು ನೇರವಾಗಿ ಇಳಿಬಿಟ್ಟು ನೆಟ್ಟಗೆ ನಿಂತಿದ್ದಾನೆ. ಅವನ ಕಾಲ ಬಳಿ ಯಕ್ಷ ಮತ್ತು ಯಕ್ಷಿಯರ ಶಿಲ್ಪಗಳನ್ನು ಕೆತ್ತಲಾಗಿರುತ್ತದೆ.

(೭)

| | | |
|---|---|---|
| ಮೂರ್ತಿಶಿಲ್ಪ | : | ಜ್ವಾಲಾಮಾಲಿನಿ |
| ಭಂಗಿ | : | ಸುಖಾಸೀನ |
| ಸ್ಥಳ | : | ಅಮ್ಮಣಗಿ ಪಾರ್ಶ್ವನಾಥ ಬಸದಿಯ ಸಭಾಮಂಟಪದಲ್ಲಿದೆ. |
| ಶಿಲೆ | : | ಕೆಂಪು ಮಿಶ್ರಿತ ಬಳಪದ ಕಲ್ಲು |

**ಮೂರ್ತಿಶಿಲ್ಪದ ವಿವರಣೆ**

ಜ್ವಾಲಾಮಾಲಿನಿಯು ಸಿಂಹಪೀಠದ ಮೇಲೆ ಕುಳಿತಿದ್ದು ವಿಗ್ರಹವು ೬೫ ಸೆಂ.ಮೀ. ಎತ್ತರ, ೪೩ ಸೆಂ.ಮೀ. ಅಗಲವಾಗಿರುತ್ತದೆ. ವಿಗ್ರಹವು ಸುತ್ತಲೂ ಪ್ರಭಾವಳಿಯಿದ್ದು, ಅದರಲ್ಲಿ ಹೂವುಗಳ ಸುಂದರ ಕೆತ್ತನೆಯಿರುತ್ತದೆ. ಮಧ್ಯದಲ್ಲಿ ಪದ್ಮಾಸನದಲ್ಲಿರುವ ತೀರ್ಥಂಕರನ ವಿಗ್ರಹವನ್ನು ಕೆತ್ತಲಾಗಿರುತ್ತದೆ. ಇವಳು ಎರಡು ಕೈಗಳನ್ನು ಹೊಂದಿದ್ದು ಬಲಗೈಯಲ್ಲಿ ಪುಷ್ಪಗೊಂಚಲು ಮತ್ತು ಎಡಗೈಯಲ್ಲಿ ಬೀಜಪುರವನ್ನು ಹಿಡಿದಿರುತ್ತಾಳೆ. ಶಿರದ ಸುತ್ತಲೂ ಅರ್ಧಚಂದ್ರಾಕಾರದ ಅಲಂಕರಣೆಯಿದ್ದು ಕಿವಿಯಲ್ಲಿ ಕಿವಿಯೋಲೆ, ಕೊರಳಲ್ಲಿ ಮಣಿಸರ, ಕಂಠಹಾರ, ಪದಕದ ಸರ ಧರಿಸಿದ್ದಾಳೆ. ಕೈಗಳಲ್ಲಿ ಕೈಗಡಗ ಹಾಗೂ ಬೆರಳಲ್ಲಿ ಬೆರಳುಂಗುರಗಳನ್ನು ಧರಿಸಿದ್ದು ಕಾಲಲ್ಲಿ ಕಾಲ್ಗಡಗಗಳಿರುತ್ತವೆ. ಎರಡೂ ಭುಜಗಳ ಮೇಲೆ ಬಳ್ಳಿ ಅಲಂಕರಣೆಯನ್ನು ಕಾಣಬಹುದು. ನಡವನ್ನು (ಸೊಂಟವನ್ನು) ಅತಿ ಸಣ್ಣದಾಗಿ ಕೆತ್ತಲಾಗಿರುತ್ತದೆ. ನಡಕ್ಕೆ ಸೊಂಟಪಟ್ಟಿಯನ್ನು ಕಟ್ಟಲಾಗಿದ್ದು ಶಿಲ್ಪದ ಕೆಳಗೆ ಎರಡೂ ಪಕ್ಕದಲ್ಲಿ ಚಿಕ್ಕ ಶಿಲ್ಪಗಳನ್ನು ಕಾಣಬಹುದು.

(೮)

| | | |
|---|---|---|
| ವಿಗ್ರಹ | : | ಪಾರ್ಶ್ವನಾಥ |
| ಭಂಗಿ | : | ಖಡ್ಗಾಸನ |

| | | |
|---|---|---|
| ಸ್ಥಳ | : | ಜೈನ ಬಸದಿಯ ನವರಂಗದಲ್ಲಿ |
| ಕಾಲ | : | ಕ್ರಿ.ಶ. ೯ ನೆಯ ಶತಮಾನ |
| ಗ್ರಾಮ | : | ಬೆನಿವಾಡ (ಹುಕ್ಕೇರಿಯಿಂದ ೧೦ ಕಿ.ಮೀ. ದೂರ) |

**ಮೂರ್ತಿಶಿಲ್ಪದ ವಿವರಣೆ**

೨೩ನೆಯ ತೀರ್ಥಂಕರನಾದ ಪಾರ್ಶ್ವನಾಥ ವಿಗ್ರಹವು ಬೆನಿವಾಡ ಜೈನಬಸದಿಯ ನವರಂಗದಲ್ಲಿದೆ. ಇದು ೧೦೫ ಸೆಂ.ಮೀ. ಎತ್ತರ, ೪೬ ಸೆಂ.ಮೀ. ಅಗಲವಿದ್ದು, ಖಡ್ಗಾಸನ ಭಂಗಿಯಲ್ಲಿದೆ. ಈ ಮೂರ್ತಿಯ ಬಲಪಾದದ ಹಿಮ್ಮಡದಿಂದ ಸುರುಳಿಯಾಕಾರದ ಹಾವಿನ ಕೆತ್ತನೆಯಿದೆ. ತಲೆಯ ಮೇಲೆ ಮುಕ್ಕೊಡೆಯಿದ್ದು ಅದರ ಮೇಲೆ ಏಳು ಹೆಡೆಯ ಸರ್ಪದ ಕೆತ್ತನೆಯಿರುತ್ತದೆ. ಈ ಮೂರ್ತಿಯ ನಾಲ್ಕು ಬದಿಗೆ ಧ್ಯಾನಾಸಕ್ತದಲ್ಲಿ ಕುಳಿತ ನಾಲ್ಕು ಚಿಕ್ಕ ಮೂರ್ತಿಗಳನ್ನು ಕೆತ್ತಲಾಗಿರುತ್ತದೆ. ಮೂರ್ತಿಯ ಮೇಲ್ಭಾಗದಲ್ಲಿ ಪ್ರಭಾವಳಿಯಿದ್ದು ಈ ಮೂರ್ತಿಯ ಪಾದಪೀಠದಲ್ಲಿ ಅಸ್ಪಷ್ಟವಾದ ಶಾಸನವಿರುತ್ತದೆ.

**ಇತರ ಪ್ರತಿಮೆಗಳು**

| | | |
|---|---|---|
| ಮೂರ್ತಿಶಿಲ್ಪ | : | ಶಾಸನ ಸುಂದರಿ |
| ಭಂಗಿ | : | ತ್ರಿಭಂಗಿ |
| ಸ್ಥಳ | : | ಸಂಕೇಶ್ವರದ ವೀರನಾರಾಯಣ ದೇವಾಲಯದ ದಕ್ಷಿಣ ಹೊರಗೋಡೆ |
| ಬಳಸಿದ ಶಿಲೆ | : | ಕಪ್ಪು |

**ವಿಗ್ರಹದ ವಿವರಣೆ**

ವೀರನಾರಾಯಣದ ದೇವಾಲಯದ ಹೊರಗೋಡೆಗಳು ಹಿಂಚಾಚು ಮತ್ತು ಮುಂಚಾಚುಗಳಿಂದ ಕೂಡಿದ್ದು ಅವುಗಳಲ್ಲಿ ಮೂರ್ತಿ ಶಿಲ್ಪಗಳ ಅಲಂಕರಣೆಯಿರುತ್ತದೆ. ಗರ್ಭಗುಡಿಯ ಹೊರಗಿನ ಗೋಡೆಗಳಲ್ಲಿ ಸು.೪೦ಕ್ಕೂ ಹೆಚ್ಚು ವಿವಿಧ ಭಂಗಿಯ ಶಿಲ್ಪಗಳನ್ನು ಕಾಣಬಹುದು. ಇಲ್ಲಿನ ಮೂರ್ತಿ ಶಿಲ್ಪಗಳು ನಾಜೂಕು ಮತ್ತು ನಯನ ಮನೋಹರವಾಗಿವೆ. ಕೆಲವು ಮೂರ್ತಿಗಳು ಹಾಳಾಗಿವೆ. ಈ ದೇವಾಲಯವು ಬೇಲೂರು ಹಳೇಬೀಡಿನ ಶಿಲ್ಪಗಳನ್ನು ನೆನೆಯುವಂತೆ ಮಾಡುತ್ತವೆ.

ವೀರನಾರಾಯಣ ದೇವಾಲಯದ ದಕ್ಷಿಣ ಭಾಗದ ಹೊರಗೋಡೆಯಲ್ಲಿ ಈ ಶಾಸನ ಸುಂದರಿಯ ಮೂರ್ತಿಯನ್ನು ಕೆತ್ತಲಾಗಿದೆ. ಈ ಶಿಲಾಬಾಲಿಕೆಯು ತ್ರಿಭಂಗಿಯಲ್ಲಿ ನಿಂತು ಕೈಯೆತ್ತಿ ಕಡತವನ್ನು ಬಿಚ್ಚಿ ಬರೆಯುವ ಭಂಗಿಯಲ್ಲಿದ್ದಾಳೆ. ಅದರಲ್ಲಿನ ಮೂರುವರೆ ಸಾಲುಗಳನ್ನು 'ಕುಲಹೀನಶ್ಚ ಕರ್ಮಹೀನಶ್ಚನ ಪೂಜಯಂತೆ' ಎಂದು ಗುರುತಿಸಲಾಗಿದೆ. ಈ ಶಿಲಾಬಾಲಿಕೆಯು ಕೈಯಲ್ಲಿ ಕೈಗಡಗ ಮತ್ತು ಕಾಲಲ್ಲಿ ಕಾಲ್ಗಡಗಳನ್ನು ಧರಿಸಿರುತ್ತಾಳೆ. ಮೊದಲು ಬೀದರದ ಜಲಸಂಗವಿಯಲ್ಲಿ ದೊರೆತ ಶಿಲಾಬಾಲಿಕೆ ಒಂದೇ ಎಂದು ನಂಬಲಾಗಿತ್ತು. ಇದು ಕರ್ನಾಟಕದಲ್ಲಿ ದೊರೆತ ಎರಡನೆಯ ಅಪರೂಪದ ಬರೆಯುವ ಶಿಲಾಬಾಲಿಕೆ ಎಂದು ಹೇಳಬಹುದು.

**ಅಡಿಟಿಪ್ಪಣಿಗಳು**

೧. ಕನ್ನಡ ವಿಶ್ವಕೋಶ, ಸಂ.-೧೨, ಪು.೭೮೮.

೨. ಸಂಕೇಶ್ವರದ ಸಾಂಸ್ಕೃತಿಕ ದರ್ಶನ, ಇತಿಹಾಸ ದರ್ಶನ, ಸಂ.-೨, ಪು.೨೨೦.

೩. ಬೆಳಗಾವಿ ಡಿಸ್ಟ್ರಿಕ್ ಗೆಜೆಟೀಯರ್, ಬೆಂಗಳೂರು, ೧೯೮೭, ಪು. ೨೪೩.

# ಅಧ್ಯಾಯ–೫

## ಸಮಾರೋಪ

ಕರ್ನಾಟಕದ ಪ್ರಮುಖ ಜಿಲ್ಲೆಗಳಲ್ಲೊಂದಾದ ಬೆಳಗಾವಿ ಜಿಲ್ಲೆಯಲ್ಲಿನ ೧೦ ತಾಲೂಕುಗಳಲ್ಲಿ ಒಂದಾದ ಹುಕ್ಕೇರಿ ಪ್ರದೇಶವು ಹಲವು ರಾಜರ ಆಡಳಿತಕ್ಕೆ ಒಳಪಟ್ಟಿರುವುದು ಆ ಪ್ರದೇಶದಲ್ಲಿ ದೊರಕಿರುವ ಪ್ರಾಚ್ಯಾವಶೇಷಗಳ ಹಿನ್ನಲೆಯಿಂದ ತಿಳಿದುಕೊಳ್ಳಬಹುದು. ಈ ಪ್ರದೇಶದಲ್ಲಿ ನಿರ್ಮಿತವಾಗಿರುವ ದೇವಾಲಯಗಳು, ಬಸದಿಗಳು ಮತ್ತು ಇಂಡೋ–ಇಸ್ಲಾಮಿಕ್ ಮಾದರಿಯ ಕಟ್ಟಡಗಳು ಈ ಮಾತನ್ನು ಪುಷ್ಠೀಕರಿಸುತ್ತವೆ. ಬೆಳಗಾವಿ ಜಿಲ್ಲೆಯು ಕುಹುಂಡಿ–೩೦೦೦ ಪ್ರದೇಶದ ಒಂದು ಭಾಗವಾಗಿದ್ದು ಶಾತವಾಹನರಿಂದ ಹಿಡಿದು ಬಹುಮನಿ ಸುಲ್ತಾನರು ಹಾಗೂ ಬಿಜಾಪುರದ ಆದಿಲ್‌ಷಾಹಿ ರಾಜರುಗಳ ಆಡಳಿತಕ್ಕೆ ಒಳಪಟ್ಟಿದ್ದನ್ನು ವಿವಿಧ ಅರಸರ ಕಾಲದಲ್ಲಿ ಹೊರಡಿಸಲ್ಪಟ್ಟಿರುವ ಶಾಸನಗಳು ಹಾಗೂ ಅವರು ನಿರ್ಮಿಸಿದ ರಚನೆಗಳನ್ನು ಗಮನಿಸಿದಾಗ ಗೊತ್ತಾಗುತ್ತದೆ. ಇಲ್ಲಿರುವ ಶಾಸನಗಳು, ದೇವಾಲಯಗಳ ನಿರ್ಮಾಣಕಾಲ, ದೇವಾಲಯಗಳಿಗೆ ದಾನ–ದತ್ತಿನೀಡಿದ ವಿಷಯಗಳನ್ನು ತಿಳಿಸುತ್ತವೆ. ಹುಕ್ಕೇರಿ ಭಾಗದಲ್ಲಿ ದೊರೆಯುವ ಶಾಸನಗಳು ಸಾಮಾಜಿಕ ಆರ್ಥಿಕ, ಧಾರ್ಮಿಕ ವಿಷಯಗಳನ್ನು ಸಮಗ್ರವಾಗಿ ಪ್ರಸ್ತುತಪಡಿಸಲಾಗಿದೆ. ಬಹಳಷ್ಟು ಶಾಸನಗಳು ಸವೆದು ಹೋದ ಸ್ಥಿತಿಯಲ್ಲಿರುವುದರಿಂದ ಅವುಗಳಲ್ಲಿರುವ ವಿಷಯಗಳು ಬೆಳಕಿಗೆ ಬಾರದೇ ಈ ಪ್ರದೇಶದ ಇತಿಹಾಸ ಕತ್ತಲೆಯಿಂದ ಕೂಡಿದ ಸುರುಳಿನಲ್ಲಿದ್ದಂತೆ ಭಾಸವಾಗುತ್ತದೆ. ಈ ಕಾರಣದಿಂದ ಕೆಲವು ದೇವಾಲಯಗಳ ನಿರ್ಮಾಣ ಕಾಲವನ್ನು ನಿಶ್ಚಿತವಾಗಬೇಕಾಗಿದೆ. ಇತರ ಪ್ರದೇಶಗಳಲ್ಲಿ ಸಮಕಾಲೀನ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳ ಜೊತೆಗೆ ಹೋಲಿಕೆ ಮಾಡಿ ಅವುಗಳ ಮಹತ್ವವನ್ನು ಗುರುತಿಸಿಕೊಳ್ಳಬೇಕಾಗಿದೆ. ಅಲ್ಲದೇ ಈ ಪ್ರದೇಶದ ದೇವಾಲಯಗಳಲ್ಲಿ ಕಂಡು ಬರುವ ಲಕ್ಷಣಗಳೊಂದಿಗೆ ಹೋಲಿಕೆ ಮಾಡಿ. ಅವುಗಳ ನಿರ್ಮಾಣ ಕಾಲವನ್ನು ಗುರುತಿಸಬೇಕಾದ ಅನಿವಾರ್ಯತೆಯು ಸಂಶೋಧಕನಿಗೆ ಬಂದೋದಗುತ್ತದೆ.

ಬೆಳಗಾವಿ ಜಿಲ್ಲೆಯು ಕುಹುಂಡಿ ೩೦೦೦ ಪ್ರದೇಶದ ಭಾಗವಾಗಿದ್ದ ಹುಕ್ಕೇರಿ ಪ್ರದೇಶದಲ್ಲಿ ಹೆಚ್ಚಾಗಿ ಸವದತ್ತಿಯ ರಟ್ಟರು, ಕಲ್ಯಾಣದ ಚಾಲುಕ್ಯರು ಮತ್ತು ಸೇವುಣರು, ಬಿಜಾಪುರದ ಆದಿಲ್‌ಷಾಹಿಗಳ ಆಡಳಿತವು ಹೆಚ್ಚಾಗಿ ಆಗಿರುವದನ್ನು ಇಲ್ಲಿನ ಹಲವಾರು ಶಾಸನಗಳು ಸಮರ್ಥಿಸುತ್ತವೆ. ಆದ್ದರಿಂದ ಇಲ್ಲಿ ರಟ್ಟರ ಕಲ್ಯಾಣದ ಚಾಲುಕ್ಯರ ಮತ್ತು ಬಿಜಾಪೂರದ ಆದಿಲ್‌ಷಾಹಿಗಳ ಕಾಲದಲ್ಲಿ ನಿರ್ಮಿತವಾದ ದೇವಾಲಯಗಳು ಮತ್ತು ಕಟ್ಟಡಗಳು ಹೆಚ್ಚಾಗಿ ಕಂಡು ಬರುತ್ತವೆ.

ಈ ಪ್ರದೇಶದಲ್ಲಿನ ದೇವಾಲಯಗಳನ್ನು ಗಮನಿಸಿದಾಗ ಇಲ್ಲಿ ಶೈವ ದೇವಾಲಯಗಳು ಅಧಿಕ ಸಂಖ್ಯೆಯಲ್ಲಿ ನಿರ್ಮಾಣಗೊಂಡಿರುವದು ತಿಳಿದುಬರುತ್ತದೆ. ಇವುಗಳು ಹೆಚ್ಚಾಗಿ ಕಾಲಕಾಲಕ್ಕೆ ಜೀರ್ಣೋದ್ಧರ ಹೊಂದಿ ಇನ್ನೂ ಸುಸ್ಥಿತಿಯಲ್ಲಿರುವದು ಕಂಡುಬರುತ್ತದೆ. ಇನ್ನೂ ಸುಸ್ಥಿತಿಯಲ್ಲಿದ್ದು ಕಲ್ಯಾಣ ಚಾಲುಕ್ಯರ ವಾಸ್ತುಶಿಲ್ಪದ ಪ್ರಮುಖ ಲಕ್ಷಣಗಳನ್ನು ಹೊಂದಿರುವ ಈ ಪ್ರದೇಶದ ಪ್ರಮುಖ ಶೈವ ದೇವಾಲಯವೆಂದರೆ ಸಂಕೇಶ್ವರದ ಶಂಕರಲಿಂಗದೇವಸ್ಥಾನ ಎಂದು ಹೇಳಬಹುದು. ಇತರ ಸ್ಥಳಗಳಾದ ಹತ್ತರಗಿ, ಘೋಡಗೇರಿ, ಸುಲ್ತಾನಪುರ, ಪಾಶ್ಚಾಪುರ ಮುಂತಾದೆಡೆಗಳಲ್ಲಿರುವ ಶೈವ ದೇವಾಲಯಗಳು ಸ್ವಲ್ಪ ಶಿಥಿಲ ಸ್ಥಿತಿಯಲ್ಲಿದ್ದು ಅವುಗಳ ಸಂರಕ್ಷಣೆಯು ತುರ್ತಾಗಿ ಮಾಡಬೇಕಾಗಿದೆ. ಬೆಳಗಾವಿ ಜಿಲ್ಲೆಯಲ್ಲಿಯೇ ವಿಮಾನನಾಗರ ಮಾದರಿಯ ಶೈಲಿಯ ಶಿಖರವನ್ನು ಹೊಂದಿರುವ ಏಕೈಕ ಹತ್ತರಗಿಯಲ್ಲಿ ಕಂಡುಬರುತ್ತದೆ. ಇದನ್ನು ಶಿಖರೇಶ್ವರ ದೇವಾಲಯವೆಂದು ಕರೆಯಲಾಗುತ್ತದೆ. ಇದೊಂದು ಹುಕ್ಕೇರಿ ಪ್ರದೇಶದ ವೈಶಿಷ್ಟ್ಯಪೂರ್ಣವಾದ ದೇವಾಲಯವಾಗಿದೆ ಎಂದು ಹೇಳಬಹುದು. ಅರ್ಜುನವಾಡ ಶಾಸನದಲ್ಲಿ ಉಲ್ಲೇಖಿತವಾಗಿರುವ ಹಾಲಶಂಕರ ಮತ್ತು ಮೊಸರಶಂಕರ ದೇವಾಲಯಗಳು ಪ್ರಸ್ತುತ ಸಂಪೂರ್ಣವಾಗಿ ನಾಶಗೊಂಡಿದ್ದು ಈಗ ಹೊಸ ಕಟ್ಟಡಗಳು ನಿರ್ಮಾಣಗೊಳ್ಳುತ್ತಿದ್ದು ಕೇವಲ ಪ್ರಾಚೀನ ಲಿಂಗಗಳನ್ನು ಮಾತ್ರ ಕಾಣಬಹುದಾಗಿದೆ.

ಈ ಪ್ರದೇಶದಲ್ಲಿ ನಿರ್ಮಾಣಗೊಂಡಿರುವ ವೈಷ್ಣವ ದೇವಾಲಯಗಳ ಸಂಖ್ಯೆಯನ್ನು ಶೈವ ದೇವಾಲಯಗಳ ಸಂಖ್ಯೆಗೆ ಹೋಲಿಸಿದರೆ ಅತೀ ವಿರಳ ಎಂದು ಹೇಳಬಹುದು. ಈ ಭಾಗದಲ್ಲಿ ಸಿಗುವ ವೈಷ್ಣವ ದೇವಾಲಯಗಳು ಎರಡು ಎಂದು ಹೇಳಬಹುದು. ೧. ಯಮಕನವಮರಡಿಯ ವೇಣುಗೋಪಾಲ ದೇವಾಲಯ ಮತ್ತು ೨. ಸಂಕೇಶ್ವರದಲ್ಲಿರುವ ವೀರನಾರಾಯಣ ದೇವಾಲಯ. ವೀರನಾರಾಯಣ ದೇವಾಲಯವು ಕಲ್ಯಾಣ ಚಾಲುಕ್ಯರ ಪ್ರಮುಖ ವಾಸ್ತುಶಿಲ್ಪ ಲಕ್ಷಣಗಳನ್ನು ಬಿಂಬಿಸುವ ಇನ್ನೊಂದು ದೇವಾಲಯವಾಗಿದೆ. ಭುವನೇಶ್ವರಿಯಲ್ಲಿ ಶಿಲ್ಪದ ಅಲಂಕರಣೆ, ನವರಂಗಕ್ಕೆ ೩ ಪ್ರವೇಶದ್ವಾರಗಳು ಹಿಂಬಣೆ, ಮುಂಬಣೆಗಳಿಂದ ಕೂಡಿದ ಭಿತ್ತಿಗಳು ಗೋಡೆಗಳಲ್ಲಿ ಅರ್ಧಕಂಬಗಳು, ಮೂರ್ತಿಶಿಲ್ಪಗಳು ಪ್ರಮುಖವಾಗಿರುತ್ತವೆ. ದಕ್ಷಿಣ ಬದಿಯ ಗೋಡೆಯಲ್ಲಿರುವ ಶಾಸನ ಸುಂದರಿಯ ಶಿಲ್ಪವು ಬೀದರದಲ್ಲಿನ ಜಲಸಂಗವಿಯಲ್ಲಿ ದೊರೆತ ಶಾಸನ ಸುಂದರಿಯ ನಂತರ ಕರ್ನಾಟಕದಲ್ಲಿ ದೊರಕಿರುವ ಶಿಲ್ಪಗಳಲ್ಲಿ ಎರಡನೆಯದ್ದು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ದೇವಾಲಯದ ಭಿತ್ತಿಗಳು ಈ ಭಾಗದಲ್ಲಿಯೇ ಅಪೂರ್ವ ಮೂರ್ತಿಶಿಲ್ಪ ಹೊಂದಿದ್ದು ಅಪರೂಪವೆನಿಸಿವೆ. ಯಮಕನಮರಡಿಯಲ್ಲಿರುವ ವೇಣುಗೋಪಾಲ ದೇವಾಲಯವು ಹೆಚ್ಚು ಜೀರ್ಣೋದ್ಧಾರ ಹೊಂದಿರುತ್ತದೆ. ಗರ್ಭಗೃಹ ಮತ್ತು ಸಭಾಮಂಟಪ ಮಾತ್ರ ಸ್ವಲ್ಪ ಮೂಲಸ್ಥಿತಿಯಲ್ಲಿವೆ. ಮುಖಮಂಟಪವು ಇತ್ತೀಚಿನ ನಿರ್ಮಾಣವಾಗಿದೆ.

ವೈಷ್ಣವ ದೇವಾಲಯಗಳ ನಂತರದಲ್ಲಿ ಈ ಪ್ರದೇಶದಲ್ಲಿ ನಿರ್ಮಾಣವಾದ ಅಧಿಕ ಸಂಖ್ಯೆಯ ದೇವಾಲಯಗಳೆಂದರೆ ಜೈನ ಬಸದಿಗಳು, ಇವು ಇತರ ಎಲ್ಲ ಧರ್ಮದ ದೇವಾಲಯಗಳಿಗಿಂತ ಹೆಚ್ಚು ಸುಸ್ಥಿತಿಯಲ್ಲಿದ್ದು ಕಾಲಕಾಲಕ್ಕೆ ಜೀರ್ಣೋದ್ಧಾರ ಹೊಂದುತ್ತಿದ್ದರೂ ತಮ್ಮ ಮೂಲಸ್ಥಿತಿಯನ್ನು ಉಳಿಸಿಕೊಂಡು ಬಂದಿರುತ್ತವೆ. ಹುಕ್ಕೇರಿ ಭಾಗದಲ್ಲಿ ಉತ್ಖನನದ ಫಲವಾಗಿ ಬೆಳಕಿಗೆ ಬಂದಂತಹ ಒಂದು ಜೈನ ಬಸದಿಯೆಂದರೆ ಅಮ್ಮಣಗಿಯ ಪಾರ್ಶ್ವನಾಥ

ಬಸದಿ. ಈ ಬಸದಿಯು ಇನ್ನೂ ತನ್ನ ಮೂಲಸ್ಥಿತಿಯನ್ನುಳಿಸಿಕೊಂಡು ಬಂದಿದ್ದು ಕಲ್ಯಾಣದ ಚಾಲುಕ್ಯರ ಕಾಲದ ಪ್ರಮುಖ ದೇವಾಲಯ ಇದಾಗಿದೆ. ಇದರ ಮುಖ ಮಂಟಪದಲ್ಲಿ ಕಂಡು ಬರುವ ಕಕ್ಷಾಸನ, ಮೆಟ್ಟಿಲು ಮೆಟ್ಟಿಲಾಗಿ ಏರಿ ಸ್ತೂಪಿಯಲ್ಲಿ ಕೊನೆಗೊಳ್ಳುವ ಶಿಖರ ಮುಂತಾದ ಪ್ರಮುಖ ಲಕ್ಷಣಗಳನ್ನು ಹೊಂದಿರುತ್ತದೆ. ಸಂಕೇಶ್ವರದಲ್ಲಿರುವ ಪಾರ್ಶ್ವನಾಥ ಬಸದಿಯ ಮುಖಮಂಟಪವು ಜೀರ್ಣೋದ್ಧಾರಗೊಂಡಿರುವದನ್ನು ಕಾಣುತ್ತೇವೆ. ಜೈನಮತಕ್ಕೆ ಸಂಬಂಧಿಸಿದ ಪಾರ್ಶ್ವನಾಥನ ಬಸದಿ ಬೆಲ್ಲದ ಬಾಗೇವಾಡಿಯಲ್ಲಿದೆ. ಬಹುಶಃ ಇದು ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಲ್ಲಿ ನಿರ್ಮಾಣವಾಗಿದ್ದಿರಬಹುದು. ಈಬಸದಿಯಲ್ಲಿರುವ ಕಂಬಗಳು ಪ್ರಾಚೀನತೆಯ ಪ್ರತೀಕಗಳಾಗಿದ್ದರೆ ಗೋಡೆ ಭಾಗಗಳು ಹದಿನೇಳು ಹದಿನೆಂಟನೆಯ ಶತಮಾನದಲ್ಲಿ ಜೀರ್ಣೋದ್ಧಾರ ಗೊಂಡಂತೆ ಭಾಸವಾಗುತ್ತದೆ. ಇತ್ತೀಚೆಗೆ ಗುಡಿಯನ್ನು ರಿಪೇರಿ ಮಾಡಿ ತುಂಬಾ ಸುಸ್ಥಿಯಲ್ಲಿ ಇಡಲಾಗಿದೆ.

ಈ ಬಸದಿಗಳಲ್ಲಿ ಯಕ್ಷಿಣಿ ಜ್ವಾಲಾಮಾಲಿನಿಯರ ಬಿಡಿ ಶಿಲ್ಪಗಳು, ಚೌವೀಸ ತೀರ್ಥಂಕರರ ಬಿಡಿ ಶಿಲ್ಪಗಳನ್ನು ಈ ದಿನಗಳಲ್ಲೂ ಕಾಣುತ್ತೇವೆ.

ಉಲ್ಲೇಖಿಸಿದ ದೇವಾಲಯಗಳಲ್ಲದೇ ಇನ್ನು ಕೆಲವು ದೇವಾಲಯಗಳು ಸಂಪೂರ್ಣ ಶಿಥಿಲಾವಸ್ಥೆಯಲ್ಲಿವೆ. ಉದಾಃ ಸುಲ್ತಾನಪುರ, ಕೊಟ್ಟಲಗಿ, ಪಚ್ಚಾಪುರ, ಶಿರೂರು, ಕೋಚರಿ, ಯಮಕನಮರಡಿ, ಬೆಳವಿ ಹಾಗೂ ಉಳ್ಳಾಗಡಿ ಖಾನಾಪುರ ಗ್ರಾಮಗಳಲ್ಲಿ ಹನ್ನೊಂದು ಮತ್ತು ಹನ್ನೆರಡನೆಯ ಶತಮಾನದಲ್ಲಿ ನಿರ್ಮಾಣವಾಗಿದ್ದಿರಬಹುದು. ಹಲವು ನಿರ್ಮಿತಿಗಳ ಕುರುಹುಗಳನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಲಾಯಿತು. ಈ ದೇವಾಲಯಗಳು ಅವಶೇಷಗಳಾಗಿ ಉಳಿದುಕೊಂಡಿವೆ. ಇಂಥ ಗುಡಿಯ ಸುತ್ತಮುತ್ತಲು ಮಹತ್ವದ ಹಲವಾರು ಶಿಲ್ಪಾವಶೇಷಗಳನ್ನು ಈವರೆಗೂ ಕಾಣಬಹುದಾಗಿದೆ. ಮುಖ್ಯವಾಗಿ ನಿಡಸೋಸಿ ಹಾಗೂ ಮೊದಗಾ ಗ್ರಾಮಗಳಲ್ಲಿರುವ ಗುಡಿಗಳ ಆವರಣದಲ್ಲಿ ಕಲಾತ್ಮಕವಾಗಿ ಕೆತ್ತಿರುವ ಶಿಲ್ಪಗಳನ್ನು ಈವರೆಗೂ ರಕ್ಷಿಸಿ ಇಡಲಾಗಿದೆ.

ಹುಕ್ಕೇರಿ ಪ್ರದೇಶವು ಬಿಜಾಪುರದ ಆದಿಲ್‌ಷಾಹಿಗಳ ಆಡಳಿತಕ್ಕೆ ಒಳಪಟ್ಟಿದ್ದು ಇವರ ಆಡಳಿತಾವಧಿಯಲ್ಲಿ ನಿರ್ಮಾಣಗೊಂಡಿರುವ ಅನೇಕ ಮುಸ್ಲಿಂಸ್ಮಾರಕಗಳನ್ನು ಹುಕ್ಕೇರಿ ಮತ್ತು ಗಜಬರವಾಡಿಗಳಲ್ಲಿ ಕಾಣುತ್ತೇವೆ. ಹುಕ್ಕೇರಿಯಲ್ಲಿರುವ ಒಂದೇ ಸಾಲಿನಲ್ಲಿರುವ ಗುಮ್ಮಟಗಳು ತಮ್ಮ ಕಲಾಶೈಲಿಯಿಂದ ಆಸಕ್ತಿಯನ್ನು ಕೆರಳಿಸುತ್ತವೆ. ಇವು ಗುಮ್ಮಟಗಳಾಗಿದ್ದರೂ ಸಹ ಇವು ಸಮಾಧಿಗಳಾಗಿರುವದಿಲ್ಲ. ಗೋಡೆಗಳ ಮೇಲೆ ಬೃಹತ್ ಕಮಾನುಗಳು, ಗೋಡೆಯ ಮೇಲೆ ನಾಲ್ಕೂ ಮೂಲೆಗಳಲ್ಲಿ ಚಿಕ್ಕಸ್ತಂಭ ಮಿನಾರುಗಳು, ಮಧ್ಯೆ ಬೃಹತ್ ಗುಮ್ಮಟಗಳನ್ನು ಹೊಂದಿದ್ದು ಇಸ್ಲಾಂ ಕಲಾಶೈಲಿಯನ್ನು ಬಿಂಬಿಸುವ ಪ್ರಮುಖ ಕಟ್ಟಡಗಳಾಗಿರುತ್ತವೆ.

ಒಟ್ಟಾರೆ ಅಭಿಪ್ರಾಯಿಸುವುದಾದರೆ ಇಡೀ ತಾಲೂಕು ಪ್ರದೇಶವನ್ನು ಸಮಗ್ರವಾಗಿ ಹಾಗೂ ವಿಸ್ತೃತವಾಗಿ ಕ್ಷೇತ್ರಕಾರ್ಯ ಮಾಡುವುದರ ಮೂಲಕ ಐತಿಹಾಸಿಕ ಕುರುಹುಗಳು ಅಥವ ಸಂಗತಿಗಳನ್ನು ಪರಿಚಯಿಸುವ ಮತ್ತು ತಕ್ಕಮಟ್ಟಿಗೆ ವಿಶ್ಲೇಷಿಸುವ ಕಾರ್ಯವನ್ನು ಪ್ರಯತ್ನಪೂರ್ವಕವಾಗಿ ಮಾಡಲಾಗಿದೆ.

## ಪರಾಮರ್ಶನ ಗ್ರಂಥಗಳು

೧. ಅ.ಸುಂದರ, ೧೯೭೫, ಅರ್ಲಿ ಚೇಂಬರ್ ಟೂಂಬ್ಸ್ ಆಫ್ ಸೌಥ್ ಇಂಡಿಯಾ ಯುನಿವರ್ಸಿಟಿ ಪಬ್ಲಿಷರ್ಸ್, ದೆಹಲಿ
೨. ಅಪರ್ಣ ಕೂಸ, ೧೯೯೯, ದೇವಾಲಯ ವಾಸ್ತುಶಿಲ್ಪ, ಪ್ರಸಾರಾಂಗ, ಕವಿವಿ, ಹಂಪಿ.
೩. ಇಚ್ಚಂಗಿ ರಾಜಶೇಖರ, ೨೦೦೫, ಸವದತ್ತಿಯ ರಟ್ಟರು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು,
೪. ಕಲಬುರ್ಗಿ ಎಂ.ಎಂ, ೨೦೧೦, ಮಾರ್ಗ ಸಂಪುಟ–೧, ಸ್ವಪ್ನ ಬುಕ್ ಹೌಸ್, ಬೆಂಗಳೂರು.
೫. ಕರ್ನಾಟಕ ಪರಂಪರೆ ಸಂಪುಟ–೧, ೨೦೦೬, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.
೬. ಕೃಷ್ಣರಾವ್ ಎಂ.ಎ ಮತ್ತು ಕೇಶವ ಭಟ್ಟ ಎಂ, ೧೯೭೦, ಕರ್ನಾಟಕ ಇತಿಹಾಸ ದರ್ಶನ, ಬೆಂಗಳೂರು,
೭. ಕೊಪ್ಪ ಎಸ್.ಕೆ, ೧೯೯೦, ತರ್ದವಾಡಿ ನಾಡು ಒಂದು ಅಧ್ಯಯನ, ಪ್ರತಿಭಾ ಪ್ರಕಾಶನ, ಸಿಂದಗಿ ರೋಡ್, ಇಂಡಿ.
೮. ಗುಂಜಾಳ ಎಸ್.ಆರ್(ಸಂ), ೨೦೦೩, ಬೆಳಗಾವಿ ಬೆಳಕು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
೯. ಗೋಪಾಲ್ ಬಿ.ಆರ್, ೧೯೬೯, ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್, ಸಂಪುಟ–೫, ಮೈಸೂರು
೧೦. ಚಿದಾನಂದಮೂರ್ತಿ ಎಂ, ೨೦೦೨, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸ್ವಪ್ನ ಬುಕ್ ಹೌಸ್, ಬೆಂಗಳೂರು
೧೧. ಚಿದಾನಂದಮೂರ್ತಿ, ೧೯೭೫, ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು, ಬೆಂಗಳೂರು.
೧೨. ತಿಪ್ಪೇರುದ್ರಸ್ವಾಮಿ ಎಚ್, ೧೯೧೯, ವಚನಗಳಲ್ಲಿ ವೀರಶೈವ ಧರ್ಮ, ಧಾರವಾಡ.
೧೩. ದೇಸಾಯಿ ಪಿ.ಬಿ, ೧೯೬೯, ಬಸವೇಶ್ವರಾ ಅಂಡ್ ಹಿಸ್ ಟೈಮ್ಸ್, ಪ್ರಸಾರಾಂಗ, ಕವಿವಿ, ಧಾರವಾಡ.
೧೪. ನಾಯಕ ಹಾ.ಮಾ(ಪ್ರ.ಸಂ) ೧೯೭೯, ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
೧೫. ನಾರಾಯಣ ಪಿ.ವ್ಹಿ, ೧೯೯೭, ವಚನ ಸಾಹಿತ್ಯ: ಒಂದು ಸಾಂಸ್ಕೃತಿಕ ಅಧ್ಯಯನ, ತೋಂಟದಾರ್ಯ ಪ್ರಕಾಶನ, ಗದಗ.
೧೬. ನೇಗಿನಹಾಳ ಎಂ.ಬಿ, ೧೯೯೯, ನೇಗಿನಹಾಳ ಪ್ರಬಂಧಗಳು, ಪ್ರಸಾರಾಂಗ, ಕವಿವಿ, ಹಂಪಿ

೧೭. ಪ್ರಭಾಕರ್ ಎಂ.ಎನ್, ೨೦೦೧, ದೇವಾಲಯ ವಾಸ್ತು, ಪ್ರಸಾರಾಂಗ, ಕವಿವಿ, ಹಂಪಿ.
೧೮. ಪಾಟೀಲ್ ಮನೋಜ, ೧೯೮೧, ಬೆಳಗಾವಿ ಜಿಲ್ಲಾ ಮಾರ್ಗದರ್ಶಿ, ಪವನ ಪ್ರಕಾಶನ, ಟಿಳಕವಾಡಿ, ಬೆಳಗಾವಿ,
೧೯. ಪಾಟೀಲ ಎಲ್.ವ್ಹಿ, ೨೦೧೧, ಘಟಪ್ರಭೆ ಸಿರಿ, ೨೦೧೧, ಕನ್ನಡ ಸಾಹಿತ್ಯ ಪರಿಷತ್ತು ತಾಲೂಕು ಘಟಕ, ಹುಕ್ಕೇರಿ.
೨೦. ಮುತಾಲಿಕ ಆರ್.ಆರ್, ೧೯೮೭, ಹುಕ್ಕೇರಿ ತಾಲೂಕು ದರ್ಶನ, ಐ.ಬಿ.ಹೆಚ್.ಪ್ರಕಾಶನ, ಬೆಂಗಳೂರು.
೨೧. ಮೋಹನ್‌ಕೃಷ್ಣ ರೈ ಕೆ, ೨೦೦೪, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೨. ರಾಘವಾಚಾರ ಎನ್.ಎಸ್, ೧೯೭೦, ಕರ್ನಾಟಕ ಪರಂಪರೆ, ಸಂಪು-೧, ಬೆಂಗಳೂರು.
೨೩. ರಾಜಶೇಖರ ಎಸ್, ೧೯೮೮, ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಸುಜಾತ ಪಬ್ಲಿಕೇಷನ್, ಧಾರವಾಡ.
೨೪. ಶಿವರುದ್ರಪ್ಪ ಜಿ.ಎಸ್, ೧೯೭೫, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೪ ಭಾಗ-೧, ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು.
೨೫. ಸುಂಕಾಪುರ ಎಂ.ಎಸ್ (ಪ್ರ.ಸಂ.), ೧೯೭೬, ಕರ್ನಾಟಕ ಭಾರತಿ, ಸಂಪುಟ-೪, ಭಾಗ-೧, ಸಂಪುಟ-೯, ಸಂಚಿಕೆ-೪, ಕವಿವಿ, ಧಾರವಾಡ
೨೬. ಹಿರೇಮಠ ಆರ್.ಸಿ(ಪ್ರ.ಸಂ) ೧೯೭೬, ಕರ್ನಾಟಕ ಭಾರತಿ ಸಂ.೯, ಸಂಚಿಕೆ-೪, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ,
೨೭. ಹಿರೇಮಠ ಆರ್.ಸಿ. ಮತ್ತು ಕಲಬುರ್ಗಿ ಎಂ.ಎಂ (ಸಂ), ೧೯೭೪, ಕನ್ನಡ ಶಾಸನ ಸಂಪದ, ಕವಿವಿ, ಧಾರವಾಡ.

**ಪತ್ರಿಕೆಗಳು**

೧. ಇತಿಹಾಸ ದರ್ಶನ, ಸಂ.೧೧, ೧೯೯೬, ಬೆಂಗಳೂರು.
೨. ಅಡವಿಸಿರಿ ಸ್ಮರಣ ಸಂಚಿಕೆ, ೨೦೦೧, ಹುಕ್ಕೇರಿ.
೩. ಹುಕ್ಕೇರಿ ಸಿರಿ, ಸ್ಮರಣ ಸಂಚಿಕೆ, ೨೦೧೦, ಹುಕ್ಕೇರಿ.

# ಬೆಳಗಾವಿ ಜಿಲ್ಲೆ


ಬಿಜಾಪುರ ಜಿಲ್ಲೆ
ಅಥಣಿ
ಮಹಾರಾಷ್ಟ್ರ
ಚಿಕ್ಕೋಡಿ
ರಾಯಭಾಗ
ಹುಕ್ಕೇರಿ
ಗೋಕಾಕ
ರಾಮದುರ್ಗ
ಬೆಳಗಾವಿ
ಸವದತ್ತಿ
ಬೈಲಹೊಂಗಲ
ಖಾನಾಪುರ
ಗೋವಾ
ಧಾರವಾಡ ಜಿಲ್ಲೆ
ಉ
ಉತ್ತರ ಕನ್ನಡ ಜಿಲ್ಲೆ
ಸ್ಕೇಲ್ ಪ್ರಕಾರ ಇರುವುದಿಲ್ಲ

# ಹುಕ್ಕೇರಿ ತಾಲೂಕಿನ ಪ್ರಮುಖ ಐತಿಹಾಸಿಕ ಸ್ಥಳಗಳು



೧. ಶಿಪ್ಪೂರ
೨. ಬೈರಾಪೂರ
೩. ಸಂಕೇಶ್ವರ
೪. ನಿಡಸೋಸಿ
೫. ಅಮ್ಮಣಗಿ
೬. ಎಲಿಮುನ್ನೋಳಿ
೭. ಶೇಲಾಪೂರ
೮. ಬೆಳವಿ
೯. ಬೆಲ್ಲದ ಬಾಗೇವಾಡಿ
೧೦. ಸಾರಾಪೂರ
೧೧. ಹುಕ್ಕೇರಿ
೧೨. ಮುಸರಗುಪ್ಪಿ
೧೩. ಕೋಚರಿ
೧೪. ಅರ್ಜುನವಾಡ
೧೫. ಉ. ಖಾನಾಪೂರ
೧೬. ಕೋಟಬಾಗಿ
೧೭. ಸುಲ್ತಾನಪೂರ
೧೮. ಹತ್ತರಗಿ
೧೯. ಯಮಕನಮರ್ಡಿ
೨೦. ಬಡಕಲ್
೨೧. ಘೋಡಗೇರಿ
೨೨. ಪಾಶ್ಚಾಪೂರ



## ತಲನಕ್ಷೆ - ಪಾರ್ಶ್ವನಾಥ ಬಸದಿ ಅಮ್ಮಣಗಿ






ಸ್ಕೇಲ್ ಪ್ರಕಾರ ಇರುವುದಿಲ್ಲ



ತಲನಕ್ಷೆ - ಪಾರ್ಶ್ವನಾಥ ಬಸದಿ, ಸಂಕೇಶ್ವರ






ಸ್ಕೇಲ್ ಪ್ರಕಾರ ಇರುವುದಿಲ್ಲ

ತಲನಕ್ಷೆ - ಶಂಕರಲಿಂಗ ದೇವಾಲಯ, ಸಂಕೇಶ್ವರ



ತಲನಕ್ಷೆ - ನೀಲಕಂಠೇಶ್ವರ ದೇವಾಲಯ, ಘೋಡಗೇರಿ






ಸ್ಕೇಲ್ ಪ್ರಕಾರ ಇರುವುದಿಲ್ಲ

ತಲನಕ್ಷೆ - ಶಿಖರೇಶ್ವರ ದೇವಾಲಯ, ಹತ್ತರಗಿ






ಸ್ಕೇಲ್ ಪ್ರಕಾರ ಇರುವುದಿಲ್ಲ



ಶಿಖರೇಶ್ವರ ದೇವಾಲಯದ ಪಾಶ್ವನೋಟ,
ಹತ್ತರಗಿ



ಕಲ್ಮೇಶ್ವರ ದೇವಾಲಯ, ಹತ್ತರಗಿ



ವೀರಭದ್ರ ದೇವಸ್ಥಾನ, ಹತ್ತರಗಿ



ಭಾವಕ್ಕಾಯಿ ದೇವಾಲಯ, ಮೊದಗಾ



ಗಜಲಿಂಗೇಶ್ವರ ದೇವಾಲಯ, ಘೋಡಗೇರಿ



ರಾಮಲಿಂಗೇಶ್ವರ ದೇವಾಲಯ, ಘೋಡಗೇರಿ



ಜೈನ ಬಸದಿ, ಅಮ್ಮಣಗಿ



ಮಲ್ಲಿಕಾರ್ಜುನ ದೇವಸ್ಥಾನ, ಅಮ್ಮಣಗಿ



ಕಲ್ಮೇಶ್ವರ ದೇವಾಲಯ, ಕೋಚರಿ



ಜೈನ ಬಸದಿ, ಅಮ್ಮಣಗಿ



ನಾರಾಯಣ ದೇವಾಲಯ, ಸಂಕೇಶ್ವರ



ವಿಠ್ಠಲರುಕ್ಮಾಯಿ ದೇವಾಲಯ, ಬೆಳವಿ



ದರ್ಪಣ ಸುಂದರಿ,
ನಾರಾಯಣ ದೇವಾಲಯ, ಸಂಕೇಶ್ವರ



ಬರೆಯುತ್ತಿರುವ ಶಿಲಾಬಾಲಿಕೆ
ನಾರಾಯಣ ದೇವಾಲಯ, ಸಂಕೇಶ್ವರ



ನಿಶದಿಗಲ್ಲು, ಉಳ್ಳಾಗಡ್ಡಿಖಾನಾಪೂರ



ವೇಣುಗೋಪಾಲ ದೇವಾಲಯದ ಗರುಡಸ್ತಂಭ,
ಯಮಕನಮರಡಿ



ಶಾಸನಗಳು ಹಣಮಂತ ದೇವಾಲಯ, ಉಳ್ಳಾಡ್ಡಿ ಖಾನಾಪುರ



ಶಾಸನಕಲ್ಲು ಹಣುಮಂತದೇವಾಲಯ, ಉಳ್ಳಾಗಡ್ಡಿ ಖಾನಾಪುರ



ಮೊಸಳೆ ಕಾರಂಜಿ, ಹುಕ್ಕೇರಿ

